ಸ್ವರವಚನ ಸಂಪುಟ : ಏಳು

# ಐನೆಲೆ ಕರಿಬಸವಾರ್ಯ ವಿರಚಿತ ಸ್ವರವಚನಗಳು

[ ಭಾಗ : ಒಂದು ]

ಸಂಪಾದಕ

ಶಿವರಾಜ ಎಂ. ದೇವಪ್ಪ



ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆ
ಜೆ.ಎಸ್.ಎಸ್. ಮಹಾವಿದ್ಯಾಪೀಠ, ಮೈಸೂರು.

SWARAVACHANA SAMPUTA - 7 AINELE KARIBASAVARYA VIRACHITA SWARAVACHANAGALU : Edited by Shri Shivaraj. M. Devappa, Gulbarga, Published by Jagadguru Shivaratreeshwara Granthamale, Mysore- 570 004.
First Edition : 1997 Pp : XVI + 227 Price : Rs 75/-

ಮೊದಲನೆಯ ಮುದ್ರಣ : ೧೯೯೭





ಪ್ರತಿಗಳು : ೬೦೦

ಬೆಲೆ : ರೂ. ೭೫/-



ಛಾಯಾಕ್ಷರ ಜೋಡಣೆ :
ವರ್ಷಿಣಿ ಗ್ರಾಫಿಕ್ಸ್, ಬೆಂಗಳೂರು - ೪೦ ✆ : 3402575

ಮುದ್ರಕರು :
ಸ್ನೇಹಾ ಪ್ರಿಂಟರ್ಸ್
೨೨, ೨ನೇ ಮೈನ್, ಅತ್ತಿಗುಪ್ಪೆ
ವಿಜಯನಗರ ೨ನೇ ಹಂತ
ಬೆಂಗಳೂರು - ೫೬೦ ೦೪೦ ✆ : 3302417

# ಹಾರೈಕೆ

ವೀರಶೈವ ಧರ್ಮಪೀಠಗಳ, ವಿಶ್ವವಿದ್ಯಾಲಯಗಳ, ಸಾರ್ವಜನಿಕ ಸಂಸ್ಥೆ ಮತ್ತು ಸರಕಾರಗಳ ಒಂದು ಶತಮಾನದ ದುಡಿಮೆಯಿಂದಾಗಿ 'ವಚನಸಾಹಿತ್ಯ'ದ ಸಂಶೋಧನೆ, ಪ್ರಕಟನೆ ಒಂದು ಹಂತಕ್ಕೆ ಬಂದು ನಿಂತಿದೆಯೆನ್ನಬಹುದು. ಇದೀಗ ಇಷ್ಟೇ ವಿಪುಲವಾಗಿರುವ, ಇದಕ್ಕಿಂತ ಹೆಚ್ಚು ಜನಪ್ರಿಯವಾಗಿರುವ "ಸ್ವರವಚನ ಸಾಹಿತ್ಯ"ದ ಸಂಶೋಧನೆ- ಪ್ರಕಟನೆ ವ್ಯಾಪಕವಾಗಿ, ವ್ಯವಸ್ಥಿತವಾಗಿ ನಡೆಯಬೇಕಾಗಿರುವುದು ಅಗತ್ಯವಾಗಿದೆ.

ಡಾ।। ಫ.ಗು. ಹಳಕಟ್ಟಿಯವರು ಮೊದಲುಮಾಡಿ, ಅನೇಕ ಜನ ವಿದ್ವಾಂಸರು ಈ ಸಾಹಿತ್ಯವನ್ನು ಆಗಾಗ ಪ್ರಕಟಿಸುತ್ತ ಬಂದರೂ ಅದು, ಬೆಳಕು ಕಂಡುದು ಕಡಿಮೆ. ಹೀಗಾಗಿ ಪ್ರಾಚೀನ ಹಸ್ತಪ್ರತಿಗಳಲ್ಲಿ, ಜನರ ಬಾಯಿಯಲ್ಲಿ ಬದುಕಿ ಬಂದ ಈ ಪ್ರಕಾರವನ್ನು ಒಮ್ಮೆ ಇಡಿಯಾಗಿ ಪ್ರಕಟಿಸಬೇಕಾಗಿದೆ. ಹಾಗೆ ಪ್ರಕಟವಾದರೆ ನಮ್ಮ ಹಾಡುಗಬ್ಬ ಪರಂಪರೆಗೆ ಇರುವ ಪ್ರಾಚೀನತೆಯನ್ನು ನಿರಂತರತೆಯನ್ನೂ ಎತ್ತಿ ತೋರಿಸಿದಂತಾಗುತ್ತದೆ. ಈ ಘನವಾದ ಉದ್ದೇಶವನ್ನು ಕಣ್ಣು ಮುಂದಿಟ್ಟುಕೊಂಡು ಸ್ವರವಚನ ಸಾಹಿತ್ಯ ಪ್ರಕಟನೆ ಯೋಜನೆಯನ್ನು ಡಾ।। ಎಂ.ಎಂ. ಕಲಬುರ್ಗಿಯವರ ನಿರ್ದೇಶನದಲ್ಲಿ "ಶ್ರೀ ಶಿವರಾತ್ರೀಶ್ವರ ಧಾರ್ಮಿಕದತ್ತಿ" ಕೈಗೆತ್ತಿಕೊಂಡಿದೆ. ಈಗಾಗಲೇ ಡಾ।। ಎಲ್. ಬಸವರಾಜು ಅವರು ಸಂಪಾದಿಸಿದ "ಶಿವದಾಸ ಗೀತಾಂಜಲಿ"ಯನ್ನು ಪ್ರಕಟಿಸುವ ಮೂಲಕ, ಈ ಸಾಹಿತ್ಯದ ಮಹತ್ವವನ್ನು ಪ್ರಥಮ ಬಾರಿಗೆ ಬೆಳಕಿಗೆ ತಂದ ನಾವು, ಅದರ ಮುಂದುವರಿಕೆಯೆಂಬಂತೆ ಈ ಯೋಜನೆಯನ್ನು ಹಮ್ಮಿಕೊಂಡಿದ್ದೇವೆ.

ಇಂಥ ವ್ಯಾಪಕ ಯೋಜನೆಯ ಅನುಷ್ಠಾನಕ್ಕೆ ವಿದ್ವಾಂಸರ ನೆರವು ಅಗತ್ಯ. ಕರ್ನಾಟಕದ ಬೇರೆ ಬೇರೆ ಭಾಗಗಳ ವಿದ್ವಾಂಸರು ಈ ಕಾರ್ಯದಲ್ಲಿ ಸಹಕರಿಸಲು ಮುಂದೆ ಬಂದುದು ಒಂದು ಶುಭಯೋಗ. ಇವರೆಲ್ಲರ ನೆರವಿನಿಂದ ಸ್ವರವಚನ ಸಾಹಿತ್ಯವನ್ನು ಮೊದಲು ಬಿಡಿ ಸಂಪುಟಗಳ ರೂಪದಲ್ಲಿ ಪ್ರಕಟಿಸಲಾಗುತ್ತದೆ. ಹೀಗೆ ಹೊರಬರಲಿರುವ ಆವೃತ್ತಿಗಳನ್ನೂ ಈಗಾಗಲೇ ಅನ್ಯರು ಪ್ರಕಟಿಸಿದ ಆವೃತ್ತಿಗಳನ್ನೂ ಕ್ರೋಡೀಕರಿಸಿ, ವ್ಯವಸ್ಥಿತವಾಗಿ ವರ್ಗೀಕರಿಸಿ, ಈ ಸಾಹಿತ್ಯ ಸಂಪತ್ತನ್ನು "ಸಮಗ್ರ ಸ್ವರವಚನಸಾಹಿತ್ಯ ಪ್ರಕಟನೆ ಯೋಜನೆ" ಹೆಸರಿನಿಂದ ಸಂಪುಟ ಶ್ರೇಣಿಯಲ್ಲಿ ಹೊರತರಲು ಸಂಕಲ್ಪಿಸಲಾಗಿದೆ.

ಈ ಸಂಕಲ್ಪವು ಈಡೇರುವಂತಾಗಲೆಂದು ಆಶಿಸುತ್ತ, ಇದರಲ್ಲಿ ನೆರವಾದ ಎಲ್ಲರಿಗೂ ಸಕಲ ಶ್ರೇಯಸ್ಸನ್ನು ಹಾರೈಸುತ್ತೇವೆ.

೧೫ ಮೇ ೧೯೯೭ — ಶ್ರೀ ಶಿವರಾತ್ರಿ ದೇಶಿಕೇಂದ್ರ ಸ್ವಾಮಿಗಳು

# ಪ್ರಸ್ತಾವನೆ

ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ೧೨ನೆಯ ಶತಮಾನದ ವಚನಕಾರರ ಚಳುವಳಿ ಹಾಗೂ ಅದರ ಪ್ರತಿಫಲವಾಗಿ ಮೂಡಿಬಂದ ವಚನಸಾಹಿತ್ಯ ಉಪಮಾತೀತವಾಗಿದೆ. ವಚನಕಾರರು ಬದುಕನ್ನು ನೋಡಿದ ದೃಷ್ಟಿ ಅನನ್ಯವಾಗಿದೆ. ಲೌಕಿಕ ಹಾಗು ಅಲೌಕಿಕ ಹೆಸರಿನಲ್ಲಿ ಎರಡು ಭಾಗವಾಗಿ ವಿಭಜಿಸಿದ ಬದುಕನ್ನು ಒಂದುಗೂಡಿಸಿ ಸಾಂಸಾರಿಕ ಜೀವನವನ್ನು ತಿರಸ್ಕರಿಸದೆ, ಅದನ್ನು ಪಾರಮಾರ್ಥಿಕ ಜೀವನದ ನೆಲೆಗಟ್ಟನ್ನಾಗಿ ಮಾರ್ಪಡಿಸಿದರು.

ಹಳಗನ್ನಡ ಕಾವ್ಯಗಳಲ್ಲಿ ಕಥಾನಾಯಕನು ಸೂರ್ಯೋದಯದೊಂದಿಗೆ ಉದಿಸಿ, ಜೀವನದ ಮಧ್ಯಾಹ್ನದಲ್ಲಿ ಪ್ರಖರವಾಗಿ ಬೆಳೆದು, ಸೂರ್ಯಾಸ್ತದೊಂದಿಗೆ ಅಸ್ತಮಿಸುತ್ತಾನೆ. ವಚನಕಾರರ ಬಿಡಿ ಬಿಡಿ ವಚನಗಳಲ್ಲಿ ಒಬ್ಬ ಜೀವಾತ್ಮನು ಭವಿಯಾಗಿ ಉದಿಸಿ, ಭಕ್ತನಾಗಿ ಬೆಳೆದು, ಐಕ್ಯಸ್ಥಲಹೊಂದಿ ಜೀವನ್ಮುಕ್ತನಾಗುತ್ತಾನೆ. ಈ ಜೀವಾತ್ಮನು ಪರಮಾತ್ಮನಾಗುವ ಬಗೆಯ:ಕಲೆಯನ್ನು ವಾಚನ ಪಾತಳಿಯಲ್ಲಿ ಹೇಳಿದ ಮಾತುಗಳು ವಚನಗಳಾದರೆ, ಶ್ರವಣಪಾತಳಿಗಾಗಿ ಹಾಡಿದ ಪದಗಳೇ ಸ್ವರವಚನಗಳು.

ಜೀವನದ ವ್ಯಾಖ್ಯಾನಗಳಾದ ವಚನಗಳು ಹಾಡಲು ಸಾಧ್ಯವಾದರೂ ಅವು ಪ್ರಧಾನವಾಗಿ ಓದುವ ವಚನಗಳು. ಸ್ವರವಚನಗಳು ಓದುವುದಕ್ಕಿಂತ ಪ್ರಧಾನವಾಗಿ ಹಾಡುವ ಪದಗಳು. ಈ ಪದಗಳಲ್ಲಿನ ವಸ್ತು, ತತ್ವ ಹಾಗೂ ಅನುಭಾವಕ್ಕೆ ಸಂಬಂಧಿಸಿರುವುದರಿಂದ ಇವುಗಳನ್ನು ತತ್ವಪದಗಳು, ಅನುಭಾವ ಪದಗಳು ಎಂದು ಕರೆಯುತ್ತ ಬಂದಿರುವರು. ಜೊತೆಗೆ ಭಕ್ತರು ತಮ್ಮ ಅಂಗಗುಣಗಳನ್ನು ಕಳೆದು ಲಿಂಗಗುಣವನ್ನು ಹೊಂದಲು ದೇವರಲ್ಲಿ ಪ್ರಾರ್ಥಿಸುವ, ಭಜಿಸುವ ಮಾಧ್ಯಮಗಳಾದ ಈ ಪದಗಳು ಭಜನೆ ಪದಗಳಾಗಿ, ಹೆಚ್ಚು ವ್ಯಾಪಕವಾಗಿ ಹರಡಲು ಕಾರಣವಾಯಿತು.

ವಿಶೇಷವೆಂದರೆ ಶಿಷ್ಟಕವಿ ಹಾಗು ಜನಪದಕವಿ ಎಂಬ ಭೇದವಿಲ್ಲದೆ ಅನುಭಾವಿಗಳೆಲ್ಲರೂ ಸ್ವರವಚನಗಳನ್ನು ಸೃಷ್ಟಿಸುತ್ತ ಬಂದಿರುವರು. ಹೀಗಾಗಿ ಬಸವಣ್ಣ ಅಕ್ಕಮಹಾದೇವಿ, ಅಲ್ಲಮಪ್ರಭು, ಸಕಲೇಶ ಮಾದರಸ, ನಿಜಗುಣ ಶಿವಯೋಗಿ, ಸರ್ಪಭೂಷಣ ಶಿವಯೋಗಿಗಳು, ಮುಪ್ಪಿನ ಷಡಕ್ಷರಿಗಳು ಮುಂತಾದವರ ತತ್ವಪದಗಳನ್ನು ಶಿಷ್ಟಸಾಹಿತ್ಯ ಪರಂಪರೆಗೆ ಸೇರಿಸಿದರೆ, ಕಡಕೋಳ ಮಡಿವಾಳಪ್ಪ, ಕೂಡಲೂರ ಶರಣರಂಥ ಅನುಭಾವಿಕವಿಗಳ ಪದಗಳನ್ನು ಜನಪದಸಾಹಿತ್ಯ ಪರಂಪರೆಗೆ ಸೇರಿಸುವ ಪ್ರಯತ್ನಗಳು ನಡೆದಿವೆ.

ಕರ್ನಾಟಕದಲ್ಲಿ ವಚನಕಾರರಿಂದ ಪ್ರಾರಂಭವಾದ ಈ ತತ್ತ್ವಪದಗಳ ಪರಂಪರೆಯನ್ನು ಮುಂದೆ ಅನೇಕ ಅನುಭಾವಿಗಳು ಮುಂದುವರೆಸಿಕೊಂಡು ಬಂದಿರುವರು. ಶಿಷ್ಟಕವಿಗಳು ತಾವು ಸೃಷ್ಟಿಸಿದ ಸ್ವರವಚನಗಳನ್ನು ತಾಳ, ರಾಗಗಳನ್ನು ಗುರುತಿಸುವುದರೊಂದಿಗೆ ಹಸ್ತಪ್ರತಿಯಲ್ಲಿ ಬರೆದಿಟ್ಟರು. ಜಾನಪದ ಕವಿಗಳು ಭಕ್ತಿಯಿಂದ ಹೃದಯ ತುಂಬಿಬಂದಾಗ ಹೊರಹೊಮ್ಮಿದ್ದ ಪದಗಳನ್ನು ಜನರ ಮಧ್ಯದಲ್ಲಿ ಹಾಡುತ್ತ ಬಂದರು. ಅದಕ್ಕೆ ಮಾರುಹೋದ ಅನೇಕ ಭಕ್ತಜನರು ತಮ್ಮ ನಾಲಗೆಯ ಮೇಲೆ ಉಳಿಸಿಕೊಂಡರು. ಆದರಿಂದ ಬಾಯಿಂದ ಬಾಯಿಗೆ ಈ ಪದಗಳು ಹರಿದು ಬಂದವು. ಕಾರಣ ಅನೇಕ ಪದಗಳು ಹಾಡುಗಾರರ ಉಳಿವಿನೊಂದಿಗೆ ಉಳಿದು, ಅವರ ಅಳಿವಿನೊಂದಿಗೆ ಅಳಿದುಹೋಗಿವೆ.

ಶಿಷ್ಟಕವಿಗಳ ಸಾಲಿಗೆ ಸೇರಿದ ಐನೂಲಿ ಕರಿಬಸವಾರ್ಯರು ಅನೇಕ ಕೃತಿಗಳನ್ನು ರಚಿಸುವುದರೊಂದಿಗೆ ಸ್ವರವಚನಗಳನ್ನೂ ಸೃಷ್ಟಿಸಿರುವರು. ಅವರ ಪದಗಳು ಕೋರಿಕಾಗದದ ಪ್ರತಿಯಲ್ಲಿ ಹಿಡಿದಿಡಲ್ಪಟ್ಟಿವೆ. ಕೆಲವು ಹಸ್ತಪ್ರತಿಗಳು ಕಾಲದ ತುಳಿತಕ್ಕೆ ನಾಶವಾಗಿವೆ. ಲಭ್ಯವಿದ್ದಷ್ಟು ಪ್ರತಿಗಳನ್ನು ಸಂಗ್ರಹಿಸಿ ಪದಗಳನ್ನು ಪರಿಷ್ಕರಿಸಿ ಇಲ್ಲಿ ಕೊಡಲಾಗಿದೆ.

"ಘೋರ ಭವಕೆ ತನುಗೊಡದಾತಗೆ
ಮೋಹಿಯೆನಲಿಕಾಗದು
ಸಾರದೈನಿಲಯಕೆ ಸಾರ್ದಾತಗೆ
ಜೀವಿಯೆನಲಿಕಾಗದು
ವೀರವರ ಚೆನ್ನವೀರನಾಳಿಗೆ
ಭವಿಯೆನಲಿಕಾಗದು"

ಎಂಬ ಈ ನುಡಿಯ ಕೆಳಗೆ "ಇತಿ ಕವೀಂದ್ರಶಾಬಕ ವಿರಚಿತ ಸ್ವರವಚನ ಸಮಾಪ್ತ ಮಂಗಳ ಮಹಾಶ್ರೀ" ಎಂದು ಬರೆಯಲಾಗಿದೆ. ಈ ಪದ ಕೊನೆಯ ಪದವಾಗಿದ್ದರೂ ಅದರ ಕ್ರಮಸಂಖ್ಯೆ ನಮೂದಿಸಿಲ್ಲವಾದ್ದರಿಂದ ಅವರ ಒಟ್ಟು ಸ್ವರವಚನ ಸಂಖ್ಯೆ ಖಚಿತವಾಗಿ ಹೇಳುವುದು ಕಷ್ಟವಾಗಿದೆ. ಈ ಕೃತಿಯಲ್ಲಿ ಎರಡು ನೂರಾ ನಲವತ್ತೆಂಟು ಪದಗಳನ್ನು ಮಾತ್ರ ಸಂಗ್ರಹಿಸಲಾಗಿದೆ ಅವುಗಳನ್ನು ಪ್ರಾರ್ಥನೆ, ಆತ್ಮಶೋಧನೆ, ತತ್ತ್ವ-ನೀತಿ ಮತ್ತು ಮಂಗಳಾರತಿ ಪದಗಳನ್ನಾಗಿ ವಿಭಾಗಿಸಿ ಪ್ರಕಟಿಸಲಾಗಿದೆ. ಹಸ್ತಪ್ರತಿಗಳಲ್ಲಿ ಕೆಲವು ಪದಗಳಿಗೆ ಮಾತ್ರ ರಾಗ ಸೂಚಿಸಲಾಗಿದೆ. ಕರಿಬಸವಾರ್ಯರ ಸ್ವರವಚನಗಳು 'ಐನೆಲೆ ಗುರು ಚೆನ್ನವೀರೇಶ' ಎಂಬ ಅಂಕಿತದೊಂದಿಗೆ ಕೊನೆಗೊಳ್ಳುತ್ತವೆ.

ನಮ್ಮ ಅನುಭಾವಿ ಕವಿಗಳ ವೈಯಕ್ತಿಕ ಬದುಕಿನ ವಿವರಗಳು ಗುರುತಿಸುವುದು ಬಹು ದುಸ್ತರದ ಕೆಲಸ. ಕರಿಬಸವಾರ್ಯರ ಜೀವನದ ವಿವರವೂ ಇದಕ್ಕೆ ಹೊರತಾದುದೇನೂ ಅಲ್ಲ. ಅವರು ತಮ್ಮ ಜೀವನದ ಪರಿಚಯ ಹೇಳಿಕೊಂಡಿರುವುದು

ಅತ್ಯಲ್ಪ. ಅವರ ಕೃತಿಗಳಲ್ಲಿ ಅಲ್ಲಲ್ಲಿ ಕಂಡುಬರುವ ಒಂದೆರಡು ಮಿಂಚಿನಂತಹ ಮಾತುಗಳ ಹಿನ್ನೆಲೆಯಲ್ಲಿ ಸ್ವಲ್ಪಮಟ್ಟಿಗೆ ಮಾಹಿತಿ ಕಂಡುಕೊಳ್ಳಲು ಪ್ರಯತ್ನಿಸಬಹುದು.

**ಸ್ಥಳ :**

ಕರಿಬಸವಾರ್ಯರೇ ತಮ್ಮ ಕೃತಿಯಲ್ಲಿ ಹೇಳಿರುವಂತೆ ಅವರು ಗುಲಬರ್ಗಾ ಜಿಲ್ಲೆಯ, ಚಿಂಚೋಳಿ ತಾಲೂಕಿನ ಐನೂಲಿ ಗ್ರಾಮದವರು. ಈ ಗ್ರಾಮಕ್ಕೆ 'ಐನೆಲೆ', 'ಐನೊಲ್ಲಿ', 'ಐನಳ್ಳಿ', 'ಐನೊಳ್ಳಿ' ಎಂದು ಕೂಡ ಕರೆಯಲಾಗುತ್ತದೆ. ಕವಿಯು ತಮ್ಮ ಈ ಗ್ರಾಮವನ್ನು 'ಬಸವೇಶ್ವರ ಸ್ತೋತ್ರದ ಪರಿವರ್ಧಿನಿ' ಕೃತಿಯಲ್ಲಿ 'ಐನೆಲೆವಾಸ ಎಂದರೆ ಐದೆಸಳಿನ ಕಮಲದಲ್ಲಿ ವಾಸನೆಂಬರ್ಥ; 'ಐ ಎಂದರೆ ಮೋಕ್ಷಂಗಳಿಗೆ, 'ನೆಲೆ' ಎಂದರೆ ಸ್ಥಾನವಾದ ಕೈಲಾಸ ಎಂದು ಬಣ್ಣಿಸಿದ್ದಾರೆ.

**ಕಾಲ :**

ಕರಿಬಸವಾರ್ಯರು ಸು. ಕ್ರಿ.ಶ. ೧೭೪೫ರಿಂದ ೧೮೪೦ರ ಮಧ್ಯದಲ್ಲಿ ಬದುಕಿದವರು ಎಂದು ಎಸ್. ಶಿವಣ್ಣ ಅವರು ಅಭಿಪ್ರಾಯಪಟ್ಟಿದ್ದಾರೆ.[೧] ಡಾ. ಬಸವರಾಜ ಸಬರದ ಅವರು "ಕ್ರಿ.ಶ. ೧೮೦೦ರಲ್ಲಿ ಕರಿಬಸವಾರ್ಯನು ಜನಿಸಿದನು." ಎಂದು ಬರೆದಿರುವರು.[೨] ಆದರೆ ಕರಿಬಸವಾರ್ಯರು ಕ್ರಿ.ಶ. ೧೮೦೫ರಲ್ಲಿ 'ಭೋಗಲಿಂಗೇಶ್ವರ ಶತಕ' ವನ್ನು ಬರೆದಿರುವುದಾಗಿ ಅವರವೇ ಆದ ಹಸ್ತಪ್ರತಿಯಿಂದ ತಿಳಿದುಬರುತ್ತದೆ. ಕಾರಣ ಕ್ರಿ.ಶ. ೧೮೦೦ರಲ್ಲಿ ಅವರು ಜನಿಸಿರುವುದು ಅಸಂಭವವಾಗುತ್ತದೆ. ಕ್ರಿ.ಶ. ೧೮೧೫ರ ಸುಮಾರಿಗೆ ಅವರು ರಚಿಸಿರುವ ಒಂದು ಪದದಲ್ಲಿ -

"ಅನಿಶಂ ನಿನ್ನನು ಬಿಡದೆ ಅತಿ ಭಜಿಸುವವನ
ಅನಪತ್ಯನ ಮಾಡೆನ್ನನಿಟ್ಟೆ ಬಸವೇಶ
ತವಸೇವಕನ ವಂಶಂ ತವೆ ವರ್ಧಿಸಲಿಕೆ
ಭುವಿಯೊಳು ನಿನಗೆಯದ್ಭುತವೆ ಬಸವೇಶ"

ಎಂದು ಗೃಹಸ್ಥ ಕರಿಬಸವಾರ್ಯನು ಮಕ್ಕಳಿಗಾಗಿ ಕೊರಗಿ ಬಸವೇಶನಲ್ಲಿ ಮೊರೆ ಇಟ್ಟಿರುವುದು ಕಂಡುಬರುತ್ತದೆ. ಇದರಿಂದ ಶ್ರೀ ಎಸ್. ಶಿವಣ್ಣ ಅವರು ಅಭಿಪ್ರಾಯಪಡುವಂತೆ ಕ್ರಿ.ಶ. ೧೭೪೫ರಲ್ಲಿ ಜನಿಸಿದ್ದೇ ಆದರೆ ಕ್ರಿ.ಶ. ೧೮೧೫ರ ಹೊತ್ತಿಗೆ ಸು. ೭೦ ವಯಸ್ಸಾಗುವುದರಿಂದ ಅವರು ಕ್ರಿ.ಶ. ೧೭೪೫ ಕ್ಕಿಂತ ಈಚೆಗೆ ಅಂದರೆ ಸುಮಾರು ಕ್ರಿ.ಶ. ೧೭೭೫ರಲ್ಲಿ ಜನಿಸಿರುವ ಸಂಭವವೇ ಹೆಚ್ಚೆನಿಸುತ್ತದೆ.

ಕ್ರಿ.ಶ. ೧೮೩೭ರಲ್ಲಿ ಚಿಡಗುಪ್ಪ ಹಿರೇಮಠದ ಬಸವಲಿಂಗಪ್ಪ ಪಟ್ಟದ್ದೇವರು ಐನೂಲಿ ಕರಿಬಸವಾರ್ಯರಿಗೆ ತಮ್ಮ ಒಂದು ಪತ್ರದಲ್ಲಿ - "ನಿಮ್ಮ ಭೇಟಿಯಿಲ್ಲದೆ

---

೧. ವೀರಶೈವ ಅಪ್ರಕಟಿತ ಗ್ರಂಥಸೂಚಿ - ಎಸ್. ಶಿವಣ್ಣ, ೧೯೮೩, ಪು.೫

೨. ಬಸವಪಥ ಸಂಪುಟ ೧೮ ಸಂ. ೮, ನವೆಂಬರ್ ೧೯೯೬, ಪು. ೪೬

ಬಹಳ ದಿವಸವಾಯಿತು. ಹೀಂಗ ಸರ್ವಥಾ ಮಾಡಬಾರದು ಪ್ರತಿವರ್ಷಕ್ಕೊಮ್ಮೆ ಬಂದು ದರ್ಶನ ತಕೊಂಡು ಹೋಗಬೇಕು. ಮೊನ್ನೆ ಚಿರಂಜೀವಿ ಬಕ್ಕಪ್ಪ ನಮ್ಮಲ್ಲಿಗೆ ಬಂದಿದ್ದ. ಆಗ್ಗೆ ನಾವು ಊರಾಗಯಿದ್ದಿಲ್ಲಾ ಆತನ ಭೇಟಿ ಆಗಿಲ್ಲ. ಈಗ ನೀವು ಪತ್ರ ಕಂಡಾಕ್ಷಣಕೆ ಬಂದು ಮಾತಾಡಿ ಹೋಗಬೇಕು." ಎಂದು ಬರೆದಿರುವುದನ್ನು ಗಮನಿಸಿದರೆ ಕ್ರಿ.ಶ. ೧೮೩೭ರಲ್ಲಿ ಕರಿಬಸವಾರ್ಯರು ಇನ್ನೂ ಹೆಚ್ಚು ದೃಢಕಾಯರಿದ್ದುದು ತಿಳಿಯುತ್ತದೆ. ಜತೆಗೆ ಬಕ್ಕಪ್ಪ (ಕರಕನಳ್ಳಿ) ನವರು ಇನ್ನೂ ಬದುಕಿದ್ದರು. ಈ ಘಟನೆಯ ನಂತರ ಬಕ್ಕಪ್ಪನವರು ಕಾಲವಾದಾಗ ಕರಿಬಸವಾರ್ಯರು

"ಪರಜನರಿಗೆ ಗಾಢ
ನೆರಳಾಗಿರುವ ದೊಡ್ಡ
ಮರವ ಮುರಿದಂತಾಯಿತು
ಅರಸಿ ಗಿರಿಜೆಮ್ಮನ
ಅರಿಸಿಣ ಸೌಭಾಗ್ಯ
ಹರಿವ ನೀರೊಳು ಕಲಸಿದಿ"

ಎಂದು ದುಃಖಿಸಿದ್ದಾರೆ. ಹೀಗಾಗಿ ಕರಿಬಸವಾರ್ಯರ ಕೊನೆಯ ದಿನಗಳು ಕ್ರಿ.ಶ. ೧೮೪೦ಕ್ಕಿಂತಲೂ ಮುಂದಕ್ಕೆ ಬರುತ್ತವೆ. ಸುಮಾರು ತೊಂಬತ್ತು ವರುಷಗಳ ತುಂಬು ಜೀವನ ಸಾಗಿಸಿದ ಕರಿಬಸವಾರ್ಯರ ಬದುಕಿನ ಕಾಲವನ್ನು ಸು. ಕ್ರಿ.ಶ. ೧೭೭೫ರಿಂದ ಕ್ರಿ.ಶ. ೧೮೬೫ರವರೆಗೆ ಗುರುತಿಸಬಹುದಾಗಿದೆ.

ಜನನ :

ಕರಿಬಸವಾರ್ಯರು ಅವರ 'ಕುಮಾರ ವಿಜಯ ವಿಳಾಸ' ಕೃತಿಯಲ್ಲಿ ವೀರಸಂಗಮದೇವನ ತಮ್ಮನಾದ "ಆ ಶತಾನಂದನ ಸುಪುತ್ರನಾ ಚೆನ್ನವೀರೇಶನ ಕರಾಂಭೋಜ ಗರ್ಭೋದ್ಭವಂ"[೧] ಎಂದು ಹೇಳಿದ್ದಾರೆ.

ತಾಯಿ - ತಂದೆಯಿಂದ ಜನಿಸಿದ ಕರಿಬಸವಾರ್ಯರು ಗುರು ಚೆನ್ನವೀರೇಶನ ಕರಕಮಲದಲ್ಲಿ ಪುನರ್ಜಾತರಾಗುವವರೆಗಿನ ಅವಧಿಯ ಬೆಳವಣಿಗೆಯ ಮಾಹಿತಿ ಮಸುಕಿನಿಂದ ಕೂಡಿದೆ.

ಬಾಲ್ಯ :

ಕರಿಬಸವಾರ್ಯರು ತಮ್ಮ ಒಂದು ಪದದಲ್ಲಿ

"ಪಾಲಿಸೆನ್ನ ಸೋಮನಾಥ.....
ಮರಣವಾದ ತಂದೆಯ ಕಂಡು
ಮರೆಹೊಕ್ಕೆನು ನಾ ಭಯಗೊಂಡು"

---

೧. ಕುಮಾರ ವಿಜಯ ವಿಳಾಸ ಕನ್ನಡ, ಅಧ್ಯಯನ ಸಂಸ್ಥೆ, ಗುಲ್ಬರ್ಗಾ - ಪು. ೮

ಎಂದು ದೇವರಲ್ಲಿ ಪ್ರಾರ್ಥಿಸಿರುವುದನ್ನು ನೋಡಿದಾಗ ಹಾಗೂ ಕ್ರಿ.ಶ. ೧೯೯೦ರಲ್ಲಿ ನಾನು, ಕರಿಬಸವಾರ್ಯರ ವಂಶಜರೆಂದು ಹೇಳಲ್ಪಡುವ ವಿರೂಪಾಕ್ಷಯ್ಯ ಮಠಪತಿ ಅವರನ್ನು ಸಂದರ್ಶಿಸಿದಾಗ ಅವರು ತಮ್ಮ ತಂದೆಯಿಂದ ಕೇಳಿದ ವಿಷಯವನ್ನು ಸ್ಮರಿಸಿಕೊಂಡು ಬರೆದುಕೊಟ್ಟಿರುವ ಹಿನ್ನೆಲೆಯಲ್ಲಿ ಗಮನಿಸುವುದಾದರೆ ಕರಿಬಸವಾರ್ಯರ ತಂದೆಯು ಅವರ ಬಾಲ್ಯದಲ್ಲಿಯೇ ಲಿಂಗೈಕ್ಯರಾಗಿರುವುದರಿಂದ ಅವರ ತಾಯಿ ಅಕ್ಕನಾಗಮ್ಮನ[೧] ಆಶ್ರಯದಲ್ಲಿಯೇ ಬೆಳೆಯುತ್ತಾರೆ. ತಂದೆಯನ್ನು ಕಳೆದುಕೊಂಡ ಮಗ ವಿದ್ಯಾಭ್ಯಾಸದಿಂದ ವಂಚಿತನಾಗಿ ಬಾಲ್ಯದಲ್ಲಿಯೇ ಮನೆಗೆಲಸದಲ್ಲಿ ತೊಡಗುತ್ತಾನೆ. ದಿನವೂ ಆಕಳುಗಳನ್ನು ಕಾಯ್ದುಕೊಂಡು ಬರುವ ಕೆಲಸ ಅವನದಾಗುತ್ತದೆ. ಊರ ಹೊರಗಡೆ ಹಳ್ಳದ ಕಡೆಗೆ ವಿಶಾಲವಾದ ಮೈದಾನದಲ್ಲಿ- 'ಬೂರಗ್ಯಾನ ಕಂಟಿ' ಯೆಂಬ ಹೆಸರಿನ ಪ್ರದೇಶದಲ್ಲಿ ಕರಿಕಲ್ಲು ಬಸವಣ್ಣನ ಹತ್ತಿರ ದನಗಳನ್ನು ಮೇಯಿಸುತ್ತ ಅದರಲ್ಲಿ ಮೈಮರೆತು ಬಿಡುತ್ತಾನೆ. ಹಳ್ಳದಲ್ಲಿ ನೀರಾಟ ಆಡಿ ಮೇಲೆ ಬಂದು ಕಲ್ಲುಗಳನ್ನು ಆಯ್ದು ಒಂದು ಕಲ್ಲಿನ ಮೇಲೆ ಇನ್ನೊಂದು ಕಲ್ಲಿನಿಂದ ಗೀಚುವುದು ಅವನಿಗದೊಂದು ದಿನನಿತ್ಯದ ಮೋಜಿನ ಆಟವಾಗುತ್ತದೆ. ಹೊರಗಡೆ ದನ ಕಾಯುತ್ತಿದ್ದರೂ ಒಳಗಡೆ ಸುಪ್ತ ಪ್ರತಿಭೆ ಅರಳುವ ಅವಕಾಶಕ್ಕಾಗಿ ಕಾಯುತ್ತಿತ್ತು.

**ಗುರುವಿನ ಅನುಗ್ರಹ :**

ಒಂದು ದಿನ ಗುರುಗಳು[೨] ಮನೆಗೆ ಬಂದು ಭೋಜನ ತೀರಿಸಿ ವಿಶ್ರಾಂತಿ ಪಡೆದು ನಂತರ ಬೂರಗ್ಯಾನಕಂಟಿ ಕಡೆಗೆ ಹೋದಾಗ ಕರಿಬಸಪ್ಪನೆಂಬ ಹುಡುಗನು ಆಟವಾಡುತ್ತಾ ಗೀಚಿದ ಕಲ್ಲುಗಳನ್ನು ಗಮನಿಸುತ್ತಾರೆ. ಮನೆಗೆ ಬಂದು ತಾಯಿ ಅಕ್ಕನಾಗಮ್ಮನಿಗೆ "ಈ ಹುಡುಗನಿಗೆ ದನಕಾಯುವುದು ಬಿಡಿಸಿ ಶಾಲೆಗೆ ಕಳಿಸಿ ವಿದ್ಯಾಭ್ಯಾಸ ಕೊಡಿಸು. ಇವನು ದೊಡ್ಡ ಕವಿಯಾಗುವನು." ಎಂದು ತಿಳಿಸುತ್ತಾರೆ.

**ವಿದ್ಯಾಭ್ಯಾಸ :**

ತಾಯಿ ಅಕ್ಕನಾಗಮ್ಮನು ಗುರುಗಳ ಮಾತಿಗೆ ಒಪ್ಪಿಕೊಂಡು ಸುಮಾರು ಹನ್ನೊಂದು ವಯಸ್ಸಿನ ಮಗನನ್ನು ಶಾಲೆಗೆ ಕಳಿಸುತ್ತಾಳೆ. ಹುಟ್ಟು ಕವಿಯಾದ ಸಹಜ ಪ್ರತಿಭಾವಂತರಾದ ಕರಿಬಸವಾರ್ಯರು ಬಹು ಬೇಗ ಓದು ಕಲಿತರು. ಕನ್ನಡ, ಸಂಸ್ಕೃತ, ತೆಲುಗು ಭಾಷೆಗಳಲ್ಲಿ ಪಾರಂಗತರಾಗುತ್ತಾರೆ. ವೀರಶೈವ ಕೃತಿಗಳೆಲ್ಲ ಕರತಲಾಮಲಕ ಮಾಡಿಕೊಳ್ಳುತ್ತಾರೆ. ಹಳಗನ್ನಡ ವ್ಯಾಕರಣ ಛಂದಸ್ಸು ನಿಘಂಟು ಅಭ್ಯಸಿಸುತ್ತಾರೆ. ಸ್ವಭಾವದಿಂದ ಭಕ್ತಿವಂತರಾದ

---

೧. ವಿರೂಪಾಕ್ಷಯ್ಯ ಮಠಪತಿ ಅವರ ಹೇಳಿಕೆ.

೨. ಗುರುಗಳ ಹೆಸರು ತಿಳಿಸಿಲ್ಲ.

ಇವರು ಭೋಗಲಿಂಗನ ಬೆಟ್ಟದಲ್ಲಿರುವ ಭೋಗಲಿಂಗನ ದರುಶನಕ್ಕೆ ಹೋಗಿ ಅಲ್ಲಿಯೇ ಅನುಷ್ಠಾನ ಮಾಡುತ್ತಾರೆ. ಅಲ್ಲದೆ ಕರಕನಳ್ಳಿ ಗ್ರಾಮದ ಹತ್ತಿರ ಹೆಣ್ಣುಮೂರ್ತಿಯ ಗುಡಿಯಲ್ಲಿಯೂ ಅನುಷ್ಠಾನ ಮಾಡಿ ಆಶೀರ್ವಾದ ಪಡೆಯುತ್ತಾರೆ.

**ಸಾಹಿತ್ಯ ಕೃಷಿ :**

ಕರಿಬಸವಾರ್ಯರು ಮಾತೃ ವಾತ್ಸಲ್ಯದಲ್ಲಿ ಬೆಳೆದು ಗುರುವಿನ ಅನುಗ್ರಹದಿಂದ ಓದು ಮುಗಿಸಿ, ಪಾಂಡಿತ್ಯ ಪಡೆಯುವುದರ ಜೊತೆಗೆ ಅನುಷ್ಠಾನ ಸಾಧನೆಯಿಂದ ಪೂರ್ಣ ವಿಕಾಸಗೊಂಡ ಪ್ರತಿಭೆಯಿಂದ ಮೊದಲು ಭೋಗಲಿಂಗೇಶ್ವರ ಶತಕವನ್ನು ಬರೆದರು. ಬಾಲ್ಯತ್ವ ಕಳೆದು ಪ್ರೌಢತ್ವಕ್ಕೆ ಕಾಲಿಟ್ಟು ನಾನಾ ಕೃತಿಗಳನ್ನು ರಚಿಸಿ ಕವಿತ್ವದಲ್ಲಿ ಪಳಗಿದರು. 'ಕವೀಂದ್ರ ಶಾಬಕ' ನೆಂಬ ಬಿರುದು ಪಡೆದರು.

ಅವರ ಸಾಹಿತ್ಯಕೃಷಿ ವೈವಿಧ್ಯಮಯವಾಗಿದೆ. ವೃತ್ತ, ಕಂದ, ರಗಳೆ, ಷಟ್ಪದಿ ಮುಂತಾದ ಛಂದಸ್ಸಿನಲ್ಲಿ ಅನೇಕ ಕೃತಿಗಳನ್ನು ರಚಿಸಿದ್ದಾರೆ. ಕನ್ನಡ ಹಾಗೂ ತೆಲುಗಿನಲ್ಲಿ ರಚಿಸಿದ ಪದಗಳು ಕರ್ನಾಟಕ, ಮಹಾರಾಷ್ಟ್ರ, ಆಂಧ್ರಪ್ರದೇಶದ ಹಲವು ಕಡೆಗೆ ಹರಿದುಹೋಗಿವೆ. 'ಪಾಹಿಮಾಂ ಶರಣು ಬಸವ' ಎಂಬ ಬಸವಸ್ತುತಿಯ ಪದವು ಮಹಾರಾಷ್ಟ್ರ ರಾಜ್ಯದ ಸೊಲ್ಲಾಪುರ ಜಿಲ್ಲೆಯ ಅಕ್ಕಲಕೋಟ ತಾಲೂಕಿನ ಮೈಂದರ್ಗಿ ಗ್ರಾಮದಲ್ಲಿ ಶಿವಾನುಭವ ಸತ್ಸಂಗದ ವತಿಯಿಂದ ಮರಾಠಿ ಲಿಪಿಯಲ್ಲಿ ಪ್ರಕಟಗೊಂಡಿರುವುದು ಅವರ ಪದಗಳ ಜನಪ್ರಿಯತೆಗೆ ಸಾಕ್ಷಿಯಾಗಿದೆ.

'ಕರಿಬಸವಾರ್ಯರ ಅಷ್ಟಾಷ್ಟಕಗಳು' ಎಂಬ ಹೆಸರಿನಲ್ಲಿ ಚಿಂಚೋಳಿ ತಾಲೂಕಿನಲ್ಲಿ ಅವರ ಎಂಟು ಅಷ್ಟಕಗಳು ಪ್ರಕಟಗೊಂಡಿವೆ. 'ಕುಮಾರ ವಿಜಯ ವಿಳಾಸಂ' ಷಟ್ಪದಿ ಕಾವ್ಯ ಗುಲಬರ್ಗಾ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಸಂಸ್ಥೆಯಿಂದ ಪ್ರಕಟಗೊಂಡಿದೆ. ಅವರ ಕೆಲವು 'ಗ್ರಂಥಗಳ ಪಟ್ಟಿ'[೧], ಶಾರದ, ಭೋಗಲಿಂಗ ಪಾರಿಜಾತ, ಕರಿಬಸವಾರ್ಯ ಕೃತ ಬಸವೇಶ್ವರ ರಘಟಾಬಂಧ[೨], ಕರಿಬಸವಾರ್ಯ ಕೃತ ಗಣನಾಮ ರತ್ನಾವಳಿ ರಗಳೆ[೩], ಬಸವೇಶ್ವರ ಸ್ತೋತ್ರದ ಪರಿವರ್ಧಿನಿ[೪], ಹಾಗು ನೀತಿ ರತ್ನಾಕರ [೫] ಕೃತಿಗಳು ಪ್ರಕಟವಾಗಿವೆ. ಅವರ ಒಟ್ಟು ಕೃತಿಗಳು ಈ ಕೆಳಗಿನಂತಿವೆ.

---

೧. ಶರಣ ಸಾಹಿತ್ಯ, ೪-೭-೧೯೪೧.

೨. ಎಸ್. ಶಿವಣ್ಣ (ಸಂ.), ಬಸವ ಪಥ ೩-೭, ಅಕ್ಟೋಬರ್ ೧೯೮೧.

೩. ಎಸ್. ಶಿವಣ್ಣ (ಸಂ.), ಬಸವ ಪಥ ೩-೮, ನವೆಂಬರ್ ೧೯೮೧.

೪. ಶಿವರಾಜ ಎಂ. ದೇವಪ್ಪ (ಸಂ.), ಬಸವ ಪಥ ೧೬-೪, ಜುಲೈ ೧೯೯೪.

೫. ಶಿವರಾಜ ಎಂ. ದೇವಪ್ಪ (ಸಂ.), ನೀತಿ ರತ್ನಾಕರ, ಪ್ರ. ಚಿತ್ಕಲೆ ಗ್ರಂಥಮಾಲೆ ಪ್ರಕಾಶನ ವಿರಕ್ತಮಠ, ಹೂವಿನಶಿಗ್ಲಿ, ೧೯೯೪.

೧. ಕುಮಾರ ವಿಜಯ ವಿಳಾಸ
೨. ಭೋಗಲಿಂಗೇಶ್ವರ ಶತಕ
೩. ಭೋಗಲಿಂಗೇಶ್ವರ ಶತಕತ್ರಯ
೪. ಸಮುದ್ರಮಥನಲೀಲಾ
೫. ಅಮ್ಮವ್ವೆಯ ಕಥೆ
೬. ಗಣನಾಮ ರತ್ನಾವಳಿ ರಗಳೆ
೭. ಬಸವರಾಜ ರಘಟಾಬಂಧ
೮. ಬಸವೇಶ್ವರ ಪವಾಡ ಪರಿವರ್ಧಿನಿ
೯. ರಟ್ಟಶಾಸ್ತ್ರದ ಟೀಕೆ
೧೦. ವೀರಸಂಗಯ್ಯನ ಚೌಪದಸ ಟೀಕೆ
೧೧. ರುದ್ರಮುನಿ ಕಂದ
೧೨. ಶಂಭುವಿನ ಕಂದ
೧೩. ಶಿವಪ್ರಾರ್ಥನಾ ಶಾರದ
೧೪. ಭೋಗಲಿಂಗ ಪಾರಿಜಾತ
೧೫. ಸಿರಿಯಾಳನಾತ್ಮಜ ಚೀಲಾಳನ ಕಥೆಯ ಗೀತಗಳು
೧೬. ಶೋಭನ ಪದಗಳು
೧೭. ಗೀತ ಪಂಚವಿಂಶತಿ
೧೮. ಶಿವಗಣ ಸಂಗೀತ
೧೯. ನೀತಿ ರತ್ನಾಕರ
೨೦. ಸ್ತೋತ್ರ ಪದಗಳು
೨೧. ಸ್ವರ ವಚನಗಳು

ಪಾಂಡಿತ್ಯ ಹಾಗೂ ಪ್ರತಿಭೆಯ ದ್ಯೋತಕಗಳಾದ ಅವರ ಕೃತಿಗಳು ಕನ್ನಡ ಸಾಹಿತ್ಯದ ಹೆಚ್ಚಿನ ಶ್ರೀಮಂತಿಕೆಗೆ ಕಾರಣಗಳಾಗಿವೆ. ಅವರ ಕೃತಿಗಳಲ್ಲಿ ಶಿವಶರಣರ ಜೀವನದ ದಟ್ಟವಾದ ಪ್ರಭಾವ ಎದ್ದುಕಾಣುತ್ತದೆ. ಅವರ ಹೆಚ್ಚಿನ ಸಾಹಿತ್ಯ ಶಿವಸ್ತುತಿ, ಶಿವಶರಣರ ಸ್ತುತಿಗೆ ಮೀಸಲಾಗಿದೆ.

**ಕೌಟುಂಬಿಕ ಜೀವನ :**

ಕರಿಬಸವಾರ್ಯರು 'ರಾಚಮ್ಮ'ನೊಂದಿಗೆ ವಿವಾಹವಾಗಿ ಗೃಹಸ್ಥ ಜೀವನದ ಹೊಸ್ತಿಲನ್ನು ಪ್ರವೇಶಿಸುತ್ತಾರೆ. ಶಿವಶರಣರ ಗಾಢವಾದ ಪ್ರಭಾವಕ್ಕೆ ಒಳಗಾದ ಅವರ

ಬದುಕು ತುಂಬ ಅನ್ಯೋನ್ಯವಾಗಿತ್ತು. 'ಸತಿ- ಪತಿಗಳೊಂದಾದ ಭಕ್ತಿ ಹಿತವಪ್ಪುದು ಶಿವಂಗೆ' ಎನ್ನುವಂತೆ ಬದುಕುತ್ತಿದ್ದ ಅವರಿಗೆ ಮಕ್ಕಳಿಲ್ಲದ ಕೊರಗು ಕಾಡಿರುವುದು ಅವರ ಒಂದು ಪದವೇ ಹೇಳುತ್ತದೆ. ಅತಿಯಾಗಿ ನಂಬಿದ ಬಸವೇಶನನ್ನು " ಕುಲಮೆನ್ನದುದ್ಧರಿಸು ಕುವರನೀವೆನೆಂದು ಬಲು ನಂಬಿದೆನು ನಿನ್ನ ಭಳಿರೆ ಬಸವೇಶ" ಎಂದು ಪ್ರಾರ್ಥಿಸುತ್ತಾರೆ. ಅವರ ಈ ಮೊರೆಗೆ ಓಗೊಟ್ಟ ಬಸವರಾಜೇಂದ್ರನನ್ನು ಕುರಿತು

"ಬಸವರಾಜೇಂದ್ರ ಪಾಲಿಸಯ್ಯ ಭಾಸುರೈನಿಲಯ
....................
ಅನಪತ್ಯನಾಗಿ ನಾನು ಅತಿ ಮೊರೆಯನಿಡಲು ನೀನು
ತನಯನ ಕೊಟ್ಟುದ್ಧರಿಸಿ ತಡೆಯದೆ ನಿರ್ಭರದಿ"

ಎಂದು ಹಾಡಿರುವುದು ನೋಡಿದರೆ ವಿವಾಹಾನಂತರ ಸ್ವಲ್ಪ ವಿಳಂಬವಾಗಿ ಮಗ ಹುಟ್ಟಿದ್ದು ಕಂಡು ಬರುತ್ತದೆ. ಅಷ್ಟೇ ಅಲ್ಲ ಮಗ ವೀರಬಸವಯ್ಯನೂ ಕವಿಯಾಗಿದ್ದನು. "ಐನೆಲೆ ಮರುಳಸಿದ್ಧ" ಮಗನ ಅಂಕಿತವಾಗಿದೆ. ಒಂದುಕಡೆಗೆ "ಶ್ರೀಮತ್ಕವೀಂದ್ರಶಾಬಕ ನೆಂಬ ಬಿರುದಿನಿಂ ಮೆರೆವ ಕರಿಬಸವೇಶ್ವರನ ತರಳ ವಿರಚಿಸಿದನೀಕಥೆ.... ಪರತರೈನೆಲೆ" ಮರುಳ ಸಿದ್ದೇಶ್ವರನ ಕೊಂಡಾಡುತೆ.... ಲವಕುಶರ ಕಥೆಯ ವಿರಚಿಸಿದೆ. ವಿಮಲಮತಿಗಳು ತಿದ್ದಿವೋದುವುದು." ಎಂದು ವಿನಂತಿಸಿಕೊಂಡಿರುವುದು ಗಮನಿಸಿದರೆ ಅತ್ಯಂತ ನಯ ವಿನಯವಂತನೂ ನಿರಹಂಕಾರಿಯೂ ಆಗಿರುವುದು ತಿಳಿಯುತ್ತದೆ. ಅನೇಕ ಪದಗಳನ್ನು ರಚಿಸಿರುವರು.

'ಇಣಜಿ ಬಸಯ್ಯ'ನವರು ಕರಿಬಸವಾರ್ಯರಿಗೆ ಬರೆದ ಒಂದು ಪತ್ರದಲ್ಲಿ "ಶ್ರೀಮತ್ ಸಚ್ಚಿದಾನಂದ ನಿತ್ಯಪರಿಪೂರ್ಣ ಅವಿರಳ ಪರಂಜ್ಯೋತಿ ಸ್ವರೂಪರಾದಂಥ ನಮ್ಮ ಐನೊಲ್ಲಿ ಕರಿಬಸಪ್ಪನವರಿಗೆ ಇಣಜಿ ಬಸಯ್ಯ ಮಾಡುವ ನಮಸ್ಕಾರವು ತಾವು ತಮ್ಮ ಸಹಕುಟುಂಬ ಸಹವಾಗಿ ಬಂದು ಕಾರಣ ಶೋಭಿತವ ಮಾಡಿಹೋಗಬೇಕು" ಎಂದು ಆಮಂತ್ರಿಸಿರುವುದು ಗಮನಿಸಿದರೆ ಕರಿಬಸವಾರ್ಯ ದಂಪತಿಗಳು ದೇಹವೆರಡಾದರೂ ಜೀವವೊಂದಾಗಿ ಬದುಕಿರುವುದು ಕಂಡುಬರುತ್ತದೆ. ಅವರ ಸಾಂಸಾರಿಕ ಜೀವನ ಆಧ್ಯಾತ್ಮಜೀವನಕ್ಕೆ ಮಾರಕವಾಗದೆ ಪೂರಕವಾಗಿತ್ತು. ಪತಿಯ ಜೊತೆ ಜೊತೆಗೆ ಬೆಳೆದ ತೀವ್ರತರವಾದ ವೈರಾಗ್ಯಭಾವದಿಂದ ಕೂಡಿದ ಸತಿ ಹಾಗು ಅತ್ಯಂತ ಪ್ರೀತಿಯ ಪುತ್ರ ಕವಿ ವೀರಬಸವಯ್ಯನವರಿಂದ ಕೂಡಿದ ಅವರ ಕೌಟುಂಬಿಕ ಜೀವನ ಅವರ ಪಾರಮಾರ್ಥಿಕ ಬದುಕಿನ ಪೀಠಿಕೆಯಾಗಿತ್ತು.

**ಆಧ್ಯಾತ್ಮ ಜೀವನ :**

ಜೀವನ ಸವೆಸಿದಂತೆಲ್ಲ ಅನುಭವ ಪಕ್ವಗೊಂಡು ಕ್ರಮೇಣ ಆಧ್ಯಾತ್ಮದ ಹಂಬಲ ಹೆಚ್ಚುತ್ತ ಹೋಗುತ್ತದೆ. ಸತಿ ಸುತ ಸುಖಭೋಗಗಳನ್ನನುಭವಿಸಿದ ಜೀವ ನಿತ್ಯಸುಖಕ್ಕಾಗಿ ಹಾತೊರೆಯುವುದು ಎದ್ದು ಕಾಣುತ್ತದೆ. ಅಶಾಶ್ವತ ಸುಖದಿಂದ ಶಾಶ್ವತ ಸುಖದೆಡೆಗೆ ಜೀವಿಯು ಸಾಗುತ್ತಿರುವ ಬದುಕಿನ ಸಂಘರ್ಷವನ್ನು ಇಲ್ಲಿ ಕಾಣುತ್ತೇವೆ.

"ಸತಿಸುತಾದಿ ಸೌಖ್ಯಭೋಗ ಸಟೆವಿದೆಂದೀಡಾಡೊ
ಅತುಳ ಮಹಾನಂದ ಪದದೊಳಂತರಿಸದೆ ಕೂಡೊ"

ಎಂದು ಸಟೆಯಾದ ಅಲ್ಪಾನಂದದಿಂದ ದಿಟವಾದ ಮಹಾನಂದದೆಡೆಗೆ ಸಾಧನೆ ಮುಂದುವರೆಯುತ್ತದೆ. ಮತ್ತೆ ಬಸವೇಶನಲ್ಲಿ

"ಪ್ರಾಚೀನ ಕರ್ಮದಿಂ ನೀಚ ಸಂಸಾರಾಬ್ಧಿ
ವೀಚಿಯೊಳು ಸಿಲುಕಿದೆನು ಬಸವರಾಜ"

ಎಂದು ತಳಮಳಿಸುತ್ತಾರೆ:

'ಕಾಮದ್ರವ್ಯ ಗಾಳಿಗಿಟ್ಟ ದೀಪದಂತೆ ನೋಡ'

ಎಂದು ಅದರ ಕ್ಷಣಿಕತನದ ಮನವರಿಕೆಯಾಗುತ್ತದೆ.

"ಘೋರ ಸಂಸಾರವೆಂಬು
ವಾರಣ್ಯದೊಳು ಬಿದ್ದು
ಪಾರಿದಪ್ಪಿದೆ ನಿಮ್ಮನರಿದೆ ಲಿಂಗಯ್ಯ
ಮಾರಾರಿಯೆನ್ನ ಗುಣವ
ನಾರಯ್ಯದಿರು ಬೀದಿ
ನೀರು ನಾನಾಬ್ಧಿ ನೀನು ಚೆಲುವ ಲಿಂಗಯ್ಯ"

"ಈಷಣತ್ರಯ ಸಮುದ್ರದೊಳು ಬಿದ್ದು
ಈಸಲಾರೆನು ದೇವ ಕೇಳು"

ಎಂದು ಸಂಸಾರದ ನಿಸ್ಸಾರತೆಯನ್ನು, ಘೋರತನವನ್ನು ತೋಡಿಕೊಂಡಿದ್ದಾರೆ.

'ಕಾಯ ಕಾತ್ಯಾಯಿನಿಯೆ
ಬಂಧನಂಗಳ ನಿವಾರಿಸೆ ನಿನ್ನ
ಕಂದನೆಂದು ತಾರಿಸೆ'

"ಮಾಯಸಂಸಾರವು ಹುಸಿಯೆಂದು
ಹೇಯ ಮಾಡಿದೆನು ದಯಾಸಿಂಧು'

"ಪಾಲಿಸುವುದಯ್ಯ ಪ್ರಾಣಲಿಂಗ
ಬಾಲನೆಮ್ಮಪನೆಂದು ಭಾವಿಸಿ ದಯಾಸಿಂಧು"

ಎಂದು ಪರಮಾತ್ಮನಲ್ಲಿ ಪರಿಪರಿಯಾಗಿ ಮೊರೆಯಿಡುತ್ತಾರೆ.

'ಎಂದಿಗೆ ದೊರಕುವುದೋ ಶಿವಸುಖ
ಸುಂದರ ಪೂರ್ಣಾನಂದದ"

ಎಂದು ಹಂಬಲಿಸುತ್ತಾರೆ. ಸಂಸಾರಸುಖದಿಂದ ಶಿವಸುಖದೆಡೆಗೆ ತಿರುಗಿದ ಸಾಧಕನು ಶರಣಸತಿ-ಲಿಂಗಪತಿ ಭಾವದಿಂದ ಹಲವು ಬಗೆಯಾಗಿ ಪತಿ ಮನವೊಲಿಸಿ ಸೇರಲು

ಪ್ರಯತ್ನಿಸಿರುವುದು ಕಂಡುಬರುತ್ತದೆ. ಪತಿಯ ಗುಣವನ್ನು ಬಲ್ಲ ಸತಿ ಅವನ ಬರುವಿಕೆಗೆ ಹಂಬಲಿಸಿರುವ ದೃಶ್ಯ ಅತ್ಯಂತ ರಮಣೀಯವಾಗಿದೆ.

"ನಿಲ್ಲೊ ನಿಲ್ಲೊ ನಿಲ್ಲೊ ನಮ್ಮನೆಗೆ ಬಾರೊ
ಒಲ್ಲೆನೆಂಬುದಲ್ಲ ಒಲಿದು ಸಾರೊ"

ಎಂದು ಕರೆಯುವ ದೃಶ್ಯ ಕಣ್ಣಿಗೆ ಶಬ್ದ ಚಿತ್ರ ಕಟ್ಟುತ್ತದೆ. ಸಾಧನೆ ಹರಳುಗಟ್ಟಿ ಅನುಭಾವ ಹೆಪ್ಪುಗಟ್ಟಿ ಪೂರ್ಣಾನಂದ ಪಡೆದು

"ಸತ್ಯ ಶ್ರೀಗುರುವಿನ ಕರುಣವ ಪಡೆದು
ಮಿಥ್ಯಭವದ ವೃಕ್ಷಮೂಲವ ಕಡಿದು
ನಿತ್ಯವಾದ ಸುಚಿತ್ತವ ಬಲಿದು
ಗೊತ್ತನರಿದು ತಾನೆ ತನ್ನೊಳು ತಿಳಿದು

ಕೇಳಿರಿ ನೀವೆಲ್ಲ ಕೌತುಕ
ವಾಮುದು ಇನ್ನೇನಿನ್ನೇನು
ನೋಡಿ ಹೇಳಲಿಕಳವಲ್ಲ ಸಾಧಿಸಿ
ದವ ಬಲ್ಲ ಇನ್ನೇನಿನ್ನೇನು"

ಎಂದು ಹಾಡುತ್ತಾರೆ.

"ಪರುಷ ಮುಟ್ಟಿದಂತಹ ಲೋಹ
ಮರಳಿ ತನ್ನ ರೂಪಾಗುವುದೆ
ಗುರುವೆ ನಿಮ್ಮ ಮುಟ್ಟಿ ನಿಮ್ಮವನಾದೆನು"

ಎಂದು ಹೇಳಿರುವಂತೆ ಗುರುಮುಟ್ಟಿ ಗುರುವಾಗಿ ಪರಿಣಮಿಸಿದರು.

ಆತ್ಮವಿಮರ್ಶೆಯಿಂದ ತನ್ನ ಕಾಳಿಕೆಯನ್ನು ಕಳೆದುಕೊಂಡು ನಿಜವನರಿತ ಕರಿಬಸವಾರ್ಯರು

'ಮೂರೆ ದಿನದ ಸಂಸಾರವೋ
ಮೂಢ ಕೇಳೊ

ನಿನ್ನ ಹಡೆದವರಳಿವುವರಿಲ್ಲಿ
ನಿನ್ನ ಪುತ್ರರಳಿವುದು ನೀ ಬಲ್ಲಿ
ನಿನ್ನ ಪಾಡೇನೆಂಪಾತ್ಮದಲ್ಲಿ
ನಿನ್ನೊಳಗೆ ನೀ ತಿಳಿಯಲೊಲ್ಲಿ"

ಎಂದು ಎಚ್ಚರಿಸುತ್ತಾರೆ.

'ಬೇಡಲೇಂ ನಾನನುಪಮದಾತ
ರೂಢಿಸಿಯೆನ್ನೊಳು ನೀನಿರುತಿರೆ ದೇವನಾಂ ಬೇಡಲೇಂ'

ಎಂದು ಸಂತೃಪ್ತ ಪೂರ್ಣಾನಂದದ ಬದುಕನ್ನು ಹೊಂದಿದ ಕರಿಬಸವಾರ್ಯರು ಲಿಂಗಾಂಗ ಸಾಮರಸ್ಯಹೊಂದಿ ಜೀವನ್ಮುಕ್ತರಾಗುತ್ತಾರೆ. ಕೊನೆಗೆ 'ಮರಳಿ ಭವಕೆ ಬರಿಸಬೇಡಯ್ಯ' ಎಂದು ದೇವರಲ್ಲಿ ಪ್ರಾರ್ಥಿಸಿಕೊಂಡು ಒಂದು ವೇಳೆ 'ಭವ ಭವಾಂತರದೊಳುದ್ಭವಿಪುದಿರ್ದರೆ ಮುಂದೆ 'ಕವಿಯೆನಿಸಿ ಪುಟ್ಟಿಸೈ ಬಸವರಾಜ' ಎಂದು ಕೋರಿಕೊಳ್ಳುವಲ್ಲಿ ಕವಿತ್ವದ ಬಗ್ಗೆ ಅವರಿಗಿರುವ ಅಪಾರವಾದ ಪ್ರೀತಿಯನ್ನು ಎತ್ತಿತೋರಿಸುತ್ತದೆ.

ಬಾಲ್ಯದಲ್ಲಿ ದನಗಳನ್ನು ಕಾಯ್ದು ಗುರುಗಳ ಅನುಗ್ರಹದಿಂದ ವಿದ್ಯಾಭ್ಯಾಸ ಪಡೆದು ಸತಿಸುತರನ್ನು ಹೊಂದಿಯೂ ಸಂಸಾರದ ತೊಡಕನ್ನು ಬಿಡಿಸಿಕೊಂಡು ದಿಟವಾದ ಮಹಾನಂದ ಪಡೆದು ನಿತ್ಯಮುಕ್ತರಾದರು. ಕೊನೆಯ ದಿನಗಳಲ್ಲಿ ಐನೂಲಿಯಿಂದ ಚಿಂಚೋಳಿಗೆ ಬಂದು ಅಲ್ಲಿಯೇ 'ನಡುವಿನ ಮಠ'ದಲ್ಲಿ ಸಮಾಧಿಸ್ಥರಾದರೆಂದು ತಿಳಿದುಬರುತ್ತದೆ.

## ಅರಿಕೆ

"ಸಚ್ಚಿದಾನಂದ ನಿತ್ಯ ಪರಿಪೂರ್ಣ ಅವಿರಳ ಪರಂಜ್ಯೋತಿ ಸ್ವರೂಪ"ರಾದಂಥ ಐನೂಲಿ ಕರಿಬಸವಾರ್ಯರು ಕಾಲದ ತೆರೆಯ ಮರೆಯಲ್ಲಿ ಬೂದಿಮುಚ್ಚಿದ ಕೆಂಡದಂತಿದ್ದಾರೆ. ೧೮ನೆಯ ಶತಮಾನದ ಕೊನೆ ಹಾಗು ೧೯ನೆಯ ಶತಮಾನದ ಮೊದಲಲ್ಲಿ ಬದುಕಿದ ಅವರು ವಿಶೇಷವಾಗಿ ಷಟ್ಪದಿ ರಚನೆಗೆ, ಅನುಭಾವ ಸಾಹಿತ್ಯಕ್ಕೆ ವಿಶೇಷ ಕೊಡುಗೆ ನೀಡಿದ್ದಾರೆ. ಸಾಹಿತ್ಯಪ್ರೇಮಿಗಳಿಂದ ಅವರವರ ಕೈಗೆ ಸಿಕ್ಕಷ್ಟು ಹಸ್ತಪ್ರತಿಗಳು ನಾನಾಕಡೆಗೆ ಹರಿದುಹೋಗಿವೆ. ಹಾಡುಗಾರರು, ಭಜನೆ ಮೇಳದವರು ಅವರ ಪದಗಳನ್ನು ಕರ್ನಾಟಕ, ಆಂಧ್ರಪ್ರದೇಶ, ಮಹಾರಾಷ್ಟ್ರದ ಹಲವೆಡೆಗೆ ಕೊಂಡೊಯ್ದಿದ್ದಾರೆ. ಅವರ ಸಮಗ್ರ ಕೃತಿಗಳು ಹಾಗೂ ಪದಗಳು ಸಂಗ್ರಹಿಸಿ ಪ್ರಕಟಿಸುವ ಕೆಲಸ ಆಗಬೇಕಿದೆ.

ಅವರ ಸ್ವರವಚನಗಳು ಅವರ ವ್ಯಕ್ತಿತ್ವಕ್ಕೂ ಅನುಭಾವಕ್ಕೂ ಹಿಡಿದ ಕನ್ನಡಿಗಳಾಗಿವೆ. ದೊರಕಿರುವ ೨೪೪ ಪದಗಳನ್ನು ಇಲ್ಲಿ ಸಂಗ್ರಹಿಸಿ ಕೊಡಲಾಗಿದೆ. ಅಭ್ಯಾಸದ ಅನುಕೂಲಕ್ಕೆಂದು ಅವುಗಳನ್ನು ೧. ಪ್ರಾರ್ಥನೆ ೨. ಆತ್ಮಶೋಧನೆ ೩. ತತ್ತ್ವ-ನೀತಿ ೪. ಮಂಗಳಾರತಿ ಎಂದು ನಾಲ್ಕು ಭಾಗಗಳಾಗಿ ವಿಂಗಡಿಸಲಾಗಿದೆ.

ವಾಚನ ಪಾಠಳಿಯ ಈ ಕೃತಿಯಲ್ಲಿ ಅನೇಕ ಪಾಠಾಂತರಗಳು ಉದ್ಭವಿಸಿವೆ. ನನ್ನ ಪರಿಷ್ಕರಣ ಪ್ರಯತ್ನಕ್ಕೂ ಮೀರಿದ ಅಂಥವುಗಳ ಮುಂದೆ ವರ್ತುಲ ಕಂಸಿನಲ್ಲಿ ಪ್ರಶ್ನೆ ಚಿಹ್ನೆ ಇಟ್ಟಿದ್ದೇನೆ. ವಿದ್ವಾಂಸರು ಈ ಪಾಠ ಸಮಸ್ಯೆಗಳನ್ನು ಬಿಡಿಸಿದರೆ ನನಗೆ ತುಂಬ ಸಂತೋಷವೆನಿಸುತ್ತದೆ.

ಸಮಗ್ರ ಸ್ವರವಚನ ಸಾಹಿತ್ಯವನ್ನು ಬೆಳಕಿಗೆ ತರಲು ಕಂಕಣಬದ್ಧರಾಗಿ ಆ ಮಾಲೆಯಲ್ಲಿ ಪ್ರಸ್ತುತ ಕೃತಿಯನ್ನೂ ತರುತ್ತಲಿರುವ ಮೈಸೂರಿನ ಶ್ರೀ ಶಿವರಾತ್ರೀಶ್ವರ ದೇಶಿಕೇಂದ್ರ ಮಹಾಸ್ವಾಮಿಗಳಿಗೆ ಪ್ರಣಾಮಗಳು.

ಸಂಗ್ರಹಗೊಂಡ ಪದಗಳು ಮತ್ತೆ ಧೂಳು ತಿನ್ನುತ್ತಿರುವಾಗ ಪದಗಳನ್ನು ಪರಿಷ್ಕರಿಸಲು ಪ್ರೇರಣೆ ನೀಡಿ, ಶೀಘ್ರದಲ್ಲಿಯೇ ಪ್ರಕಟಗೊಳ್ಳಲು ವ್ಯವಸ್ಥೆ ಮಾಡಿದ ಪೂಜ್ಯ ಗುರುಗಳಾದ ಡಾ. ಎಂ.ಎಂ. ಕಲಬುರ್ಗಿಯವರಿಗೆ ಅನಂತ ಶರಣುಗಳು.

ಇದರ ಹಸ್ತಪ್ರತಿಗಳನ್ನು ಒದಗಿಸಿಕೊಳ್ಳುವಲ್ಲಿ ನೆರವು ನೀಡಿದ ವಿದ್ಯಾಗುರುಗಳಾದ ಡಾ.ಎಂ.ಎಸ್. ಲಠ್ಠೆ ಅವರಿಗೆ, ಡಾ. ಶಾಂತವೀರ ಸುಂಕದ, ಪೂಜ್ಯಶ್ರೀ ವಿರೂಪಾಕ್ಷಯ್ಯ ಐನೂಲಿ, ಗುಂಡಯ್ಯ ಐನೂಲಿ, ಶ್ರೀ ನಾಗಪ್ಪ ಯಲಾಲ, ಸಂಗಪ್ಪ ಮಾಲಿ ಚಿಂಚೋಳಿ, ವೀರಶೆಟ್ಟಿ ಯಲಮಾಮಡಿ, ಶಂಕರೆಪ್ಪ ಗಾರಂಪಳ್ಳಿ, ಸೂರ್ಯಕಾಂತ ಹುಲಿ ಚೆನ್ನೂರ, ಗುರುನಾಥ ಮೊಘಾ ಅವರಿಗೆ ಅನಂತ ಕೃತಜ್ಞತೆಗಳು. ಸುಂದರವಾಗಿ ಮುದ್ರಿಸಿದ ಬೆಂಗಳೂರಿನ ಸ್ನೇಹಾ ಪ್ರಿಂಟರ್ಸ್ ಅವರಿಗೂ ಅನಂತ ವಂದನೆಗಳು.

- ಶಿವರಾಜ ಎಂ. ದೇವಪ್ಪ

# ಪರಿವಿಡಿ

೧

ವಾಣಿ ಎನ್ನನು ಕಾಯೆ
ಮಾಣದಿನ್ನೆಲೆ ತಾಯೆ ॥ ಪ ॥

ಅಜನ ಮೋಹದ ರಾಣಿ
ಭುಜಗಸನ್ನಿಭ ವೇಣಿ ॥ ೧ ॥

ದಿವಿಜಸ್ತ್ರೀಜನ ವಿನುತೆ
ಭುವನೈಕ ಪ್ರಖ್ಯಾತೆ ॥ ೨ ॥

ರಾಜಹಂಸ ಗಮನೆ
ರಾಜೀವಾಂಗ ಸುಮನೆ ॥ ೩ ॥

ವೀಣಾಪ್ರಾಂಚಿತ ಪಾಣಿ
ಏಣಾಂಕಾನನೆ ಜಾಣೆ ॥ ೪ ॥

[೧][ ಚಿನ್ನಿಲಮಾ][೧] ದೈನಿಲಯ
ಚೆನ್ನವೀರನ ಪ್ರಿಯೆ ॥ ೫ ॥

೨

ಸಾಂಬ ಮಾಂ ಪಾಹಿ ತ್ವಂ ಹೇರಂಬ
ಸವಿತೃ ಶ್ರೀಧವ ಕಲಂಬ
ಶೈಲೇಂದ್ರಧನ್ವ ವಿಡಂಬ
ನುತ ದಿವಿಜ ಕದಂಬ ಸಾಂಬ ಸಾಂಬ ಶ್ರೀ ಸಾಂಬ ॥ ಪ ॥

ದೇವನುತ ಯಮಿಜನ ರಾಜೀವ
ಮಿತ್ರ [ಖಾಂಡ]ವವನದಾವ

೧-೧ ಚಿನ್ನಘಲ (ಮೂ)

ಜೀಮೂತರುಚಿನಿಭಗ್ರೀವ
ಸಜ್ಜನ ಸಂಜೀವ ॥ ೧॥

ನೇತ್ರ ಶ್ರೋತ್ರಾಲಂಕಾರ ಕೃತಿ ಶುಚಿಗಾತ್ರ
ಜಲಧರಂಧಕ ಜೈತ್ರ
ಮಹೋಕ್ಷಗಮನ ಗೋತ್ರ
ರಥವಿಧಿಕಂ ಪಾತ್ರ ॥ ೨॥

ಕಾಮಜಿತ ರುಚಿರೈನೆಲೆ ನಿಜಧಾಮ
ಗುರು ಚೆನ್ನವೀರೇಶ ಭೀಮ
ಕವಿತಾಬ್ಧಿವರ್ಧನ ಸೋಮ
ಚಿನ್ಮಯ ಮತ್ತ್ರೇಮ ॥ ೩॥

೩

ಶ್ರೀಗುರು ಗತಿವಿರಹಿತರಿಗೆ ನೀನೆ ಗತಿ
ಭೋಗೋಪಭೋಗದ ಜನರಿಗೆ ನೀನೆ ಗತಿ ॥ ಪ ॥

ತವಪದ ಸೇವಕ ಜನರಿಗೆ ನೀನೆ ಗತಿ
ಭವಶರಧಿಯೊಳಾಳುವವರಿಗೆ ನೀನೆ ಗತಿ ॥ ೧ ॥

[೧][ದೂಷಣ][೧] ವಿರಹಿತ ಜನರಿಗೆ ನೀನೆ ಗತಿ
ಈಷಣತ್ರಯದೊಳು ರತರಿಗೆ ನೀನೆ ಗತಿ ॥ ೨ ॥

ನಿಜಬ್ರಹ್ಮವ ತಿಳಿದವರಿಗೆ ನೀನೆ ಗತಿ
ರುಜಕ್ಲೇಶದಿ ಬಳಲುವವರಿಗೆ ನೀನೆ ಗತಿ ॥ ೩ ॥

[೨][ಸಂ][೨]ಚಿತ ಸುಕೃತದ ಜನರಿಗೆ ನೀನೆ ಗತಿ
ಪಂಚಮಹಾಪಾತಕರಿಗೆ ನೀನೆ ಗತಿ ॥ ೪ ॥

ಅತಿಕುಶಲಹೃದಯ ಜನರಿಗೆ ನೀನೆ ಗತಿ
ಅತಿಮೂಢಾತ್ಮಕ ಜನರಿಗೆ ನೀನೆ ಗತಿ ॥ ೫ ॥

---

೧-೧ ದೋಷಕ (ಮೂ)
೨-೨ ಅಂಚಿತ (ಮೂ)

ಘನಶಿವಪದದೊಳು ರತರಿಗೆ ನೀನೆ ಗತಿ
ಅನುಚಿತಕರ್ಮದ ಜನರಿಗೆ ನೀನೆ ಗತಿ ॥ ೬ ॥

ವರದವೆನಲೆಪುರಭವರಿಗೆ ನೀನೆ ಗತಿ
ಗುರು ಚೆನ್ನವೀರೇಶ ನತರಿಗೆ ನೀನೆ ಗತಿ ॥ ೭ ॥

೪

ಮರೆಯದಿರು ನೀ ಗುರುಮಂತ್ರ
ಮರೆಯದಿರು ನೀ ಶಿವಮಂತ್ರ ॥ ಪ್ರ ॥

ಪರಿಭವಂಗಳ ಪರಿಹರಿಸುತೆ ಭಾ
ಸುರ ಚಿತ್ಕಾಂತ ಧಾರಣೆಯಾದ ಗುರುಮಂತ್ರ ॥ ೧ ॥

ಪರಿಯ ರೂಪವನೆ ಪರನ ಮಾಡಿ ಮುನಿ
ವರ ಕುಂಭಜನೊಳು ಭರಿತವಾದ ಗುರುಮಂತ್ರ ॥ ೨ ॥

ಗುರುವಿನ ಗಾತ್ರಕೆ ಶಿರವ ರಚಿಸಿಯಾ
ಗುರುಶಿರಕಂಗವ ವಿರಚಿಸಿದ ಗುರುಮಂತ್ರ ॥ ೩ ॥

ಜೀವಿತೇಶ್ವರನ ಜೀವನ ಮಂತ್ರಿಯ
ಜೀವಮುಳುವಿ ಸಂಜೀವನಾದ ಗುರುಮಂತ್ರ ॥ ೪ ॥

ಚೋಳನೃಪನಸಹವೇಳು ಶಿರ ಸ
ಮ್ಮೇಳಿಸಿ ಮೋಕ್ಷದೊಳಾಗಿಸಿದ ಗುರುಮಂತ್ರ ॥ ೫ ॥

ತಾರಕ ಬ್ರಹ್ಮಾಕಾರ್ಯೆನಲೆ "[ಯಾ]"
ಗಾರಸ್ಥಿತ ಚೆನ್ನವೀರನೆಂಬ ಗುರುಮಂತ್ರ ॥ ೬ ॥

---

೧-೧ ಮ (ಮೂ)

೫

ಗುರುಕರುಣವೇತ್ತವರಿಗೆ ನರಗುರಿಗಳು ಸರಿಬಪರೆ
ಪರಕೃಪೆಯ ಪಡೆದವರಿಗೆ ಈ ಪುಸಿ ಜನರು ಸರಿ ಬಹರೆ ॥ ಪ ॥

ಕಾಮನ ಬಾಣಕ್ಕಂಜದಾತನು ............
ಆ ಮಹಾ ನಿಜಬ್ರಹ್ಮವೇತ್ತನು ಆಶೆಯೊಳು ಸಿಲ್ಕುವನೆ ॥ ೧ ॥

ದಾನವರ ಭಯಕ್ಕಂಜಿ ಧರೆಯೊಳು ಧಾಮನಿಧಿ ಪ್ರಜ್ವಲಿಸನೆ
ಮಾನವರ ಪಳಿಗಂಜಿ ಸತ್ಕವಿ ಮಂಜುಲಕೃತಿ ರಚಿಸನೆ ॥ ೨ ॥

ಕಮಲಮಿತ್ರನ ಕಿರಣವೆದುರಿಗೆ ಕತ್ತಲಡಸಿ ನಿಲಬಲ್ಲುದೆ
ಯಮನಿಗಳಕದ ಮಹಿಮನೊಳು ಪಿಶಾಚಿ ತಾ ನಿಲಬಲ್ಲುದೆ ॥ ೩ ॥

ಮೃಗಪತಿಯ ಇದಿರಿನೊಳು ಕರಿಗಳು ಮುಸುಕಿ ಧೈರ್ಯದಿ ನಿಲುವವೆ
ಖಗಪತಿಯ ಕಂಡಳುಕದ ಫಣಿಕುಲಗಳಡಸಿ ಗೆಲುವವೆ ॥ ೪ ॥

ವಿಲಸಿತೈನಲೆವಾಸ ಚೆನ್ನವೀರೇಶನನರ್ಚಿಸಿದಾತನೆ
ಸುಲಭಪದವಿಗೆ ಸೇರಿ ನಿರುತಂ ಸಕಲರೊಳು ವಿಖ್ಯಾತನೆ ॥ ೫ ॥

೬

ಪಾಲಿಸುವುದೈ ಪ್ರಾಣಲಿಂಗ ಎನ್ನ
ಪಾಲಿಸೈ ಭಾವೇಷ್ಟಲಿಂಗ
ಮೂಲಪ್ರಣಮರೂಪ ಮುನಿಜನರ ಹೃದ್ದೀಪ
ಬಾಲನೆಮ್ಮವನೆಂದು ಭಾವಿಸಿ ದಯಾಸಿಂಧು ॥ ಧ್ರು ॥

ಈಷಣತ್ರಯ ಸಮುದ್ರದೊಳು ಬಿದ್ದು
ಈಸಲಾರೆನು ದೇವ ಕೇಳು
ರೋಷ ವಿಷಯಾತುರದ ರೋಗ ದುಃಖದ ಭರದ
ಹೇಸಿ ಸಂಸೃತಿಯಿಂದೆ ಹೆದರಿ ನೊಂದೆನು ತಂದೆ ॥ ೧ ॥

ಕಾಮಾದಿ ಷಟ್ಕುಕ್ಕುರಗಳು ದುಷ್ಟ
ತಾಮಸಾದಿ ಅಷ್ಟದಂತಿಗಳು

ಜೊಮ್ಮಿಸ್ರುವವೆನ್ನೊಳಗೆ ಜೊಂಗುಳಿಗೊಳಿಸುತೀಗೆ
ಸಾಮಾನ್ಯಗುಣವಳಿದು ಸದೃಶಂಗಳ ಕಳೆದು ॥ ೨ ॥

ಅಷ್ಟದಳಗಳನಡರಿ ನಲಿದು ಮನವು
ಅಷ್ಟದಿಕ್ಕುಗಳ ತಿರುಗುವುದು
ಕಷ್ಟಬಡುವುದು ದೈನ್ಯ ಕರುಣದಿಂದೀಶಾನ್ಯ
ಕಾಷ್ಠೆದಳವಲ್ಲಿರಿಸಿ ಕರಮಾದರಿಸಿ ಪರಸಿ ॥ ೩ ॥

ಭಾವತ್ರಯಂಗಳರಿಯದಲೆ ಕೆಟ್ಟ
ಭಾವದಿಂ ಚರಿ¹[ಸುವು]¹ದಿಂದಲೆ
ಕಾವನೆಂಬುವ ಮಗನ ಕೈವಿಡಿದು ತಾನೆ ಘನ
ತೀವಿದಗ್ನಿತ್ರಯದಿ ತಿರುಗಿಸುವುದೈ ನಯದಿ ॥ ೪ ॥

ಮನೆಯೊಳಗಿರುವ ಕಳ್ಳನಿಂದೆ
ಮಾನಧನಕಿನ್ನು ಕ್ಷೇಮವೆ ಮುಂದೆ
ವಿನಯದಿಂದ್ವೈಸೆಲೆಯ ವಿಭು ಚೆನ್ನವೀರಾರ್ಯ
ಮನವೆಂಬ ಕಪಿಯ ನಿಮ್ಮಡಿಯಲ್ಲಿರಿಸಿ ಸದಯ ॥ ೫ ॥

೭

ಶರಣು ಶ್ರೀಗುರುಲಿಂಗ
ಶರಣು ಸಜ್ಜನಸಂಗ
ಶರಣು ಜಂಗಮಲಿಂಗ ಚೆಲುವ ಲಿಂಗಯ್ಯ ॥ ಪ ॥
ನಿತ್ಯ ನಿರ್ಮಲಮೂರ್ತಿ
ಮತ್ತ್ಯಾರಿನ್ನೆನಗೆ ಗತಿ
ಅತ್ಯಂತ ಕರುಣದಿಂದೆ ನೋಡು ಲಿಂಗಯ್ಯ
ಸತ್ಯ ಶರಣರ ಮನೆಯ
ಭೃತ್ಯರಾಳಿನಾಳಿನ
ಒತ್ತೆಸ ಮಾಡಿ ಸಲಹೊ ಚೆಲುವ ಲಿಂಗಯ್ಯ ॥ ೧ ॥
ಘೋರ ಸಂಸಾರವೆಂಬು
ವಾರಣ್ಯದೊಳು ಬಿದ್ದು

---
೧-೧ ಚರಿಪು (ಮೂ)

ವಾರಿದಪ್ಪಿದೆ ನಿಮ್ಮನರಿವೆ ಲಿಂಗಯ್ಯ
ಮಾರಾರಿಯೆನ್ನ ಗುಣವ
ನಾರಾಯ್ಯದಿರು ಬೀದಿ
ನೀರು ನಾನಾಬ್ಧಿ ನೀನು ಚೆಲುವ ಲಿಂಗಯ್ಯ ॥ ೨ ॥

ಬೆಟ್ಟಕ್ಕೆ ಬಾಣವೊಡ್ಡಿ
ಬಿಟ್ಟರೆ ತಪ್ಪುವುದೆ
ಕೆಟ್ಟವರುಂಟೆ ನಿಮ್ಮ ಕೂಡಿ ಲಿಂಗಯ್ಯ
ಗಟ್ಟ್ಯಾಗಿ ಗುರಿಯ ಮಾಡಿ
ಪಟ್ಟಗಟ್ಟಿದ ಮೇಲೆ
ಬಿಟ್ಟುಹೋಗುವರೇನು ಚೆಲುವ ಲಿಂಗಯ್ಯ ॥ ೩ ॥

ಜಲಧಿ ಮೀರುಕ್ಕಿದರೆ
ಮೊಲೆಹಾಲು ನಂಜಾದರೆ
ಸಲೆ ನೋಡಲಗ್ನಿಯು ಸುಟ್ಟರೆ ಲಿಂಗಯ್ಯ
ಮಲಹರ ನೀವೆನ್ನೊಳು
ಮುಳಿದರೆ ಲೋಕದೊಳು
ನೆಲೆಯುಂಟೆ ನಿಲ್ಲುವುದಕೆ ಚೆಲುವ ಲಿಂಗಯ್ಯ ॥ ೪ ॥

ಸೇರಿ ನೀಯೆನ್ನ ಪಸ್ತ
ಸೂರೆಗೊಂಡಿರ್ದ ಮೇಲೆ
ಬೇರೆಯೆಂಬುವುದೆಮ್ಮೊಳುಂಟೆ ಲಿಂಗಯ್ಯ
ಸಾರದೈನಿಲಯ ಚೆನ್ನ
ವೀರಣಾಚಾರ್ಯ ಎನ್ನ
ಕಾರುಣ್ಯನಿಧಿಯೆ ಕಾಯೋ ಚೆಲುವ ಲಿಂಗಯ್ಯ ॥ ೫ ॥

## ೮

ಗೋರಾಜಸುತೇಪತೇ ನಮೋ ನಮೋ
ಗೋರಾಜಸುತೇಪತೇ ॥ ಪ ॥

ರಾಮರಮಾಪತಿ ಸುರಪತಿ ವಾಕ್ಪತಿ
ಸೋಮ ನಿತ್ಯಪೂಜಿತ ಮನ್ಮಥ ನಮೋ ॥ ೧ ॥

ನೀರದ ಶ್ಯಾಮಲ ಕಂಧರ ಸುಂದರ
ನಾರದ ತುಂಬುರ ಗಾನವಿಲೋಲ ॥ ೨ ॥

ಪರಮೈಸನೆಲೆಪತಿ ಚೆನ್ನವೀರೇಶ್ವರ
ಪರತರಮೋಕ್ಷಪ್ರದಾಯಕ ದಾತ ॥ ೩ ॥

೯

ಶ್ರೀಗುರು ನಿರಂಗ ಶಿಷ್ಟಜನ ಸಂಗ
ನಾಗೇಂದ್ರಜಾರ್ಧಾಂಗ ಮಾಂ ಪಾಹಿರೆ ಸಾಂಬ ॥ ಪ್ರ ॥

ಪಾಪಪಾಣಗೋಪ ಗೋಪನಗ ಚಾಪ
ಚಾಪಲತೆ ಪಾಪ ಮಾಂ ಪಾಹಿರೆ ಸಾಂಬ ॥ ೧ ॥

ದಾನವಪುರಾರಿ ದಕ್ಷಸುಮದಾರಿ
ದಾನವಹಿತಜಾರಿ ಮಾಂ ಪಾಹಿರೆ ಸಾಂಬ ॥ ೨ ॥

ಸೋಮ ಸುಪ್ರಭಾಂಕ ಸುಸ್ಥ ವೃಷಭಾಂಕ
ಭೀಮ ನಿರಾತಂಕ ಮಾಂ ಪಾಹಿರೆ ಸಾಂಬ ॥ ೩ ॥

ದುರಿತಸಂಹಾರ ದುಷ್ಟಜನ ದೂರ
ಕರುಣಾಪಾರಾಕಾರ ಮಾಂ ಪಾಹಿರೆ ಸಾಂಬ ॥ ೪ ॥

ಸಾಮಗಾನಪ್ರಿಯ ಶರ್ವ ಕಮನೀಯ
ಮಾಮಕ ಮನಶಯ್ಯ ಮಾಂ ಪಾಹಿರೆ ಸಾಂಬ ॥ ೫ ॥

ನಾರದ ತುಂಬುರ ನಾಗರಿ ಕಿನ್ನರ
ಸಾರಗೇಯ ವಿಹಾರ ಮಾಂ ಪಾಹಿರೆ ಸಾಂಬ ॥ ೬ ॥

ಚೆನ್ನವೀರಣಾರ್ಯ ಚಾರುಗುಣಧುರ್ಯ
ಪ್ರೋನ್ನತೈನಿಲಯಾರ್ಯ ಮಾಂ ಪಾಹಿರೆ ಸಾಂಬ ॥ ೭ ॥

## ೧೦

ದೇವ ತಾವಕ ಸೇವಕಜನ ಸಂ
ಜೀವ ಮಹೇಶ ಮಾಮಕ
ಭಾವ ಭವಾಂತಕ ಭಾವಿಕಗಣಸಖ
ಪಾವನ ರೂಪಕ ಪಾವಕ ಪರ್ಯಂಕ
ಭಾವ ಭವಾಂತಕ ಸುಪ್ರಭಾವ
ಭವಸಾಗರ ತಾರಣನಾವ
ಭಯಮುತ್ಕಟರುಜವನ ದಾವ
ಸುಮಹಾನುಭಾವ
ಕಿಡ್ತಕ ದಿದ್ಧಿಮಿ ದಿದ್ಧಿಮಿ ಥೋಂಗ
ಥೋಂದಧಿಕಿಟ ದಧಿಕಿಟ ಥೋಂಗ
ಕಿಡ್ತಕ ಝೇಂಕೃತ ಝೇಂಕೃತ
ಥರಿಕಿಟ ಥರಿಕಿಟ ಥೋಂ ॥ ಧ್ರು ॥

ಸೋಮಕಲಾಧರ ಸೋಮಹಿತಕರ
ಶ್ಯಾಮಚರ ಸಂಹರ ರಾಮಕಲೇವರ
ರಾಮಕಂಧರ ಜೀಮೂತೇಶವರ
ಚಾಮೀಕರಾಚಲ ಚಾಪ ಕಕುಭಚೇಲ
ಸಾಮಗಾನ ವಿಲೋಲ ಸಾರಭುಜ ಭೀಲ
ಭೀಮಭವಮೃಡ ಶಂಕರ ನಿಸ್ಸೀಮ
ಶೀತಕರರುಚಿ ರಾಮ
ರಾಜಿತ ವಿಬುಧೌಘೋದ್ದಾಮ
ಸತ್ವಮಥ ಸ್ತೋಮ
ಹೇಮಶೈಲಧಾಮ ಸಾಂಬ
ಹಿಮನಗಜಾ ಮನೋಜ್ಞ
ಸಾಮ ನಿರಘ ನಿರಾಮಯ ಗೋಮಯ
ಗೋಮಿನಿವೇಣಿ ಪುಲೋಮ
ಜಾಮರಿಕ್ಷಮ (?) ಪ್ರೇಮಕರ ॥ ೧ ॥

ನಂದ ಕುಧರಶರನಂದ ತೂಣೀರ
ದಂದಶೂಕಹಾರ ಸಿಂಧುರಸುರಹರ
ಸಿಂಧುಗೃಹದ್ವಾರ ನಂದಫಲದೋದಾರ
ಮಂದಾಕಿನೀಧರ ಮಹನೀಯಾಕಾರ

ಮಂಪರನಗಪುರ ಮಂದಜನೋದ್ಧಾರ
ಸ್ಕಂದದ್ವೈಮಾತುರ ತಾತ
ಮಂದ ಮಾರ್ಷಾನ್ವಿತ ಶಮನ ವಿ
ಸಂಘ ಸನಕಾಖ್ಯ ಸನಂದನ
ಬೃಂದ ಸಂಪೂರ್ಣಾನಂದ
ಕಂದ ತುಹಿನಚಂದ್ರ ಸಾಂಬ
ಕುಶಧಿಪುರಂದರೇಭ ಚಂದ್ರ
ಸಿತತನುಪಂದ್ಯನ ಗಂಧನ
ಸೈಂಧವಶ್ರುತಿ ಭೂಸ್ಯಂದನ
ಭುವನ ವಿಶಂದಾಪ್ಯತಕರ ॥ ೨ ॥

ಕಾಸನ ಘೃತ ಕರ ಕಾನನಚರವರ ವರ
ವೀನಗ ವಿಧಿಸಾಕಾರ ಭೇನಾತ್ಮಕ ಶರ(?)
ಭೇನ ನೀಲಾಂಬರ ಭೂನಿಯುತ ಶರೀರ
ಮಾನ್ಯೆನಿಲಯಾರ್ಯ ಮಪಚೆಸ್ನವೀರಾರ್ಯ
ಮಾನಿತ ಕವಿವರ್ಯ ಮಾನಸಾಬ್ಜಸೂರ್ಯ
ನಾನಾ ಸಚರಾಚರ ಪ್ರತಾನ ವರ ಪಾಲನ ಶೀಲ
ನೂನ ಸದ್ಭಕ್ತಚಯಾಧಿಷ್ಠಾನ ಮಹೋಕ್ಷಯಾನ
ಏನ ಕುಧರಶಂಬ ಸಾಂಬ
ಯೋಗಿ ವಿತಾನ ಸುವಿಶ್ರಂಭ
ಸರ್ವಾಧೀನ ದೀನಜನಮಾನ
ಮಾನ ಕರುಣಾಸಧೀನ
ಪಂಚಾನನ ಶುಭಕರ ॥ ೩ ॥

೧೧

ದೇವ ದಿವ್ಯದೇವ ದೇವದೇವ ಗಂಗಾವಿ
ಭವಾಂಕ ಜಟಾವಿತಾನ ಪದ್ಮಾವರಾದಿ ವಿಬು
ಧಾವಳೀಂದ್ರ ಸುಖಜೀವನೀಯನಿಧಿ
ಭಾವಭಾವಸಖ ಪಾಹಿಮಾಂ ॥ ಪ ॥

ಜಂಬಾಲಜಾಂಬಕ ಜಂಬಾಂತಕಮಣಿ
ಶಾಂಬರೀಶ ಡಿಂಬ ಶಂಬರೋಕ ಬುಂಭ

ದಂಬುಜಪಕ್ಷ ಸುತಾಂಬುದ ರುಚಿ ನಿಕು
ರುಂಬ ವಿನಿರ್ಜಿತಗಲದ್ಭುತ
ಜಂಬುಕಸದ್ದಾಮ್ಮೃತಾಂಬುರುಹಾರಿ ಕ
ಲಂಬ ಸ್ವಯಂಭುಜ ಶಂಬಕಂಬತಾರ
ಕಾಂಬರ ಕುಂಭಿವಿಡಂಬ ಚಾಂದ್ರಮುಖ
ಬಿಂಬ ವಿಜೃಂಭಿತ ತನುದ್ಯುತ ॥ ೧ ॥

ಸ್ಯಂದಖಸ್ಯಂದನ ಚಂದಿರಾರವಿಂದ
ಬಾಂಧವ ಚಕ್ರಮುಕುಂದ ಶಿಳೀಂದ್ರ
ನಂದ ಬೃಂದಾರಕಮಂದಿರಧನ್ವ ಪು
ರಂದರಾರಿಪುರ ನಾಶ ಭರ
ಕ್ರಂದನ ಗಂಧನ ಬಂಧನ ಬಂಧಿಕೃ
ತಾಂಧಕಾದಿ ವಿಕಟಾಂಧ ಚರಾಪಹ
ವಂದಾರು ಮಂದಾರ ಬಂಧುರ ಭೂಧ್ರ ಪು
ರಂದರ ನಂದನೆ ಪ್ರೇಮಭರ ॥ ೨ ॥

ಸೂರಸಮೀರ ಹಿಮಾರಿ ನರಾರಿ ಮ
ಹೀರಸಖಾತ್ಮ ಶರೀರಕ ಮಾರಪ
ರಾರುಣ ಧಾರಕ ದಾರುಣಕೃತ್ಯಪ್ರ
ಹಾರ ಧೀರಗಣವಾರಪತೇ
ಸೂರತ ಮಾರತ ಮಾರುತಿ ಸಾರಥಿ (?)
ಸಾರ ಪಿತರತಿ ಭೂರಿ ಕೃಪಾರಸ
ಪೂರಿತೈನಿಲಯ ಭೂರಮೇಶ ಚೆನ್ನ
ವೀರಣಾರ್ಯ ಕವಿವಾರ ಪತೇ ॥ ೩ ॥

೧೨

ದೇವ ಶ್ರೀಗುರು ಶಂಭು
ದೇವ ರಕ್ಷಕ ಮಹಾ
ದೇವ ಶ್ರೀಸಾಂಬ ಕಾಯೋಕಾಯೋ ॥ ಪ ॥

ಹಿಂದೆ ಶಿಲಾದನ
ಕಂಪನಂಗವೆ ಗಿರಿ

ಮಂದಿರ ಮಾಡಿ ಮೆರೆದಂತೆ
ಇಂದುಶೇಖರಯೆನ್ನ
ಸಂದ ಸುಮನಸಾರ
ವಿಂದಾಲಯದೊಳು ನೆಲೆಸಯ್ಯ ॥ ೧ ॥

ನೀಲಕಂಧರನೆ ಸ
ಲ್ಲೀಲೆಯಿಂ ಗಿರಿಗಳ
ಮೇಲೆ ಮಲಗಿ ಬಿಡದಿರುವಂತೆ
ಬಾಲಕನಿವನೆಂದು
ಪಾಲಿಸಿ ಬಂದೆನ್ನ
ನಾಲಗೆಯಲಿ ಬಂದು ನೆಲೆಸಯ್ಯ ॥ ೨ ॥

ಬೇಡರೂಪದಿ ಎಡೆ
ಯಾಡುತೋಃಲನ
ನೋಡಿ ಪಾದದ ದಸಿ ಕೀಳಿದಂತ
ತೀಡಿಯೆನ್ನನು ನಿತ್ಯ
ಕಾಡುವ ರುಜದ ಮುಳ್ಳ
ಗಾಃವದಿ ಕೀಳ್ದೆನ್ನ ರಕ್ಷಿಸಯ್ಯ ॥ ೩ ॥

ನಾಗಕನ್ನಿಕೆಯರ
ರಾಗಕೆ ಮೆಚ್ಚಿ ತಲೆ
ದೂಗಿ ಮಸ್ತಕ ಕೆಲಕೊಲಿದಂತೆ
ಈಗೆನ್ನ ಸ್ತೋತ್ರಕ್ಕನು
ರಾಗದಿ ಬಂದು ಶಿರ
ದೂಗುತನ್ನನು ನೀ ಪೋಷಿಸಯ್ಯ ॥ ೪ ॥

ಮಲೆಯೊಳು ಬೇಡನು
ಹುಲಿಗಂಜಿ ಮರನೇರ
ಲೊಲಿದು ರೂಪವದೋರಿ ಸಲಹಿದಂತೆ
ಮಲಹರ ಭವವೆಂಬ
ಹುಲಿಗಂಜಿ ಧ್ಯಾನವೆಂಬ
ಬಲು ಮರನೇರೆ ಕಾಯಿರಯ್ಯ ॥ ೫ ॥

ಜಲದೊಳು ಧೀವರ
ಬಲೆಯ ಬೀಸಲು ಸಿಲ್ಕಿ

ಚೆಲುವ ಪಂಚಾನನ ತೋರಿದಂತೆ
ಅಲಿಕಲೋಚನ ಭಕ್ತ
ಸುಲಭ ಸರ್ವೋತ್ತಮ
ಸಲೆ ನೀನೆನ್ನೊಳು ರೂಪ ತೋರಿಸಯ್ಯ ॥ ೬ ॥

ಹರಿ ವಿಧಿ ಇಂದ್ರರಿಗೆ ಗೋ
ಚರಿಸದಾತನೆಯೆನ್ನ
ಕರಕಮಲದೊಳು ನೀ ನೆಲೆಸಿದೆ
ಪರಮೈನೆಲೆಯಪುರ
ದರಸ ಚೆನ್ನವೀರೇಶ
ಕರ ಮನ ನೋಟದಿ ಬೆರೆದಿರಯ್ಯ ॥ ೭ ॥

೧೩

ಉಕ್ಷೇಂದ್ರಗ ಪಾಹಿ ಶಂಭೋ
ಮೋಕ್ಷಮದೇಹಿ
ಪಕ್ಷೇಂದ್ರಗ ಪೂಜಿತ ಪದಪದ್ಮ
ಪಾವನಗುಣಸದ್ಮ ಶಂಭೋ ॥ ಪ್ರ ॥

ಕಂಧರ ಸದೃಕ್ಷ ಶಾಮಲ
ಕಂಧರ ವಿಜಿತಾಕ್ಷ
ಸ್ಯಂದನಜಾರಿ ಭೃನ್ಮಂದಿರ ದ್ವಾರ
ಸ್ಯಂದನಕೋಟೀರ ಶಂಭೋ ॥ ೧ ॥

ಭರ್ಮೋದರ ಕರ್ಮಸಂಪೃತ
ಭರ್ಮಾಚಲ ಧರ್ಮ
ಶರ್ಮಪ್ರದ ತಾರಾದ್ರಿ ನಿಶಾಂತ
ಶರ್ವಾಣಿಕಾಂತ ಶಂಭೋ ॥ ೨ ॥

ಸುರುಚಿರೈನಿಲಯಪುರವರ
ಉರಗಾಧಿಪವಲಯ
ಕರುಣಾಕರ ಶ್ರೀಚೆನ್ನವೀರೇಶ್ವರ
ಪರತರ ಗುಣಸಾಂದ್ರ ॥ ೩ ॥

೧೪

ಪಾಲಯ ಮಾಂ ದೇವ ಶ್ರೀಕ್ಷಪಾಕರಶೇಖರ ಹರ
ಫಾಲನಯನ ಚಟುಲ ದುರಿತಪಟಲ ಕುಧರ ವಿಧುರ ॥ ದ್ರು ॥

ವೃಷಾಕಪಿ ಈಶ ಯೋಗಿವೃಂದಾರ್ಚಿತ ಪದಾಂಭೋಜ
ವೃಷಾರೂಢ ಸುಜನಚಕ್ರವೃಂದಾರಕ ಭೂಜ ॥ ೧ ॥

ರುಕ್ಮವತಿಪತಿ ವಿಪಕ್ಷ ರುಚಿರಾರುಣವರ್ಣ ನೇತ್ರ
ರುಕ್ಮಗೋತ್ರಧನ್ವ ಸುಕರುಣಕಲಾಪ ನೇತ್ರ ॥ ೨ ॥

ವಿನಾಯಕ ಜನಕ ಮಹೇಶ ವಿತತ್ಯನಿಲಯಾಧಿನಾಥ
ವಿನಾಯಕ ಗಮಿತ ಚೆನ್ನವೀರೇಶ್ವರ ಮಹಿತ ॥ ೩ ॥

೧೫ ರಾಗ - ವರಾಳಿ

ಪಾಲಯಾಂಬು (?) ರಾಮಲಿಂಗ ರಾಜಶೇಖರ
ಫಾಲನೇತ್ರ ಕವಿಗಣಾಂಬುನಿಧಿ ಸುಧಾಕರ ॥ ದ್ರು ॥

ಶಾರದತುಷಾರ ಹೀರ
ಸಾರಸಾರಿ ನೀರದಬ್ರ
ವಾರಣ ಕುಪಾರ ಡಿಂಡೀರ ನಾರದ
ಕ್ಷೀರ ಬೃಂದಾರಕ ಹಾರ ಶಂಭು
ತಾರಶುಭ್ರ ಸಾರ ಸಘನ
ಸಾರತಾರ ಗೌರನಿಭಶರೀರ ಶಂಭು ॥ ೧ ॥

ಸಲಕಲಂಬ ಕಲಗಲ ಕಜ್ಜಲ
ಜಲಭವದೃಗ್ಮಲ ಶ್ಯಾಮಲ
ಸಲಿಲಜಾಮೃಗ ಮದಭ್ರನಲಿನ ಹಿತಸುತ
ಬಲರಿಪು ಪಲವು ಮಾಮ್ರಸವ
ಜಲಜವಿಹಗ ಕುಲವಿಸರ
ಜಲದ ಲಲಿತಕಾಳಿಕುಂತಲ ವಿನೀಲಗಲ ಗಿರೀಶ ॥ ೨ ॥

ಸೂರ ವಾರಿಜಾಸನ ಮಾ
ಮಾರುತೇಷ್ಟ ಕೀರಚಂಚು
ಸಾರ ಕೋಕನದ ಸುಕಾಶ್ಮೀರ ವಿದ್ರುಮ
ಸಾರರತ್ನ ದಿವ್ಯಪ್ರ
ಭಾರುಣಾಭ ಮಂಜು ಜಟಾ
ಭಾರಕೈನಿಲಯ ಚೆನ್ನವೀರಣಾರ್ಯ ಶಂಕರ ॥ ೩ ॥

## ೧೬ ರಾಗ - ಭೈರವಿ

ವೀನಗ ನುತಚರಣ ಸಮವಗ (?)
ವೀನಗ ನಗಶರಣ
ದೀನಜನವನ ದಿವಿಜಭೌಮನ
ದೀನಜ ಪ್ರಸ್ಫುರಣ ಶಂಭು ॥ ಪ್ರ ॥

ಮೇನಕಾತ್ಮಜೇಶಾ ಶಂಕರ
ಮೇನಕ ಗೋಪೇಶ
ಭೇನಕಸಖ ಸಲಸಖ ಕಂಸಾಂಬ
ಭೇನಜ ನಗಶಂಭು ॥ ೧ ॥

ಮದನ ಹರಿವಿಪಕ್ಷ ಶಾಶ್ವತ
ಮದನ ಸದಪಕ್ಷ
ಕುಧರರಾಜ ವರಮಾವರ[೧] [ರೌ][೧]ಪ
ಕುಧರರಾಜ ಚಾಪ ಶಂಭು ॥ ೨ ॥

ಶರದರುಚಿಗ್ರೀವ ಶಕ್ರಜ
ಶರದಘವನ ದಾವ
ವರದೈನಿಲಯ ಶ್ರೀಚೆನ್ನವೀರೇ
ಶ್ವರ ದೈತ್ಯಪುರಾರೇ ಶಂಭು ॥ ೩ ॥

---

೧-೧ ರೋಪ (ಮೂ.)

೧೭

ಘನರುಚಿಗಲದೇವ ಸ[೧] [ದಯ][೧]
ಗೌರೀಶ ಸತತಂ
ಕನದನುಪಮ ಭರ್ಮಗೋತ್ರ
ಕಾಂಡಾಸನ ವಿಧೃತ ॥ ದ್ರು ॥

ಸಾಮಸಂಭವಾನನ ಪಿತ
ಸನದಗ ಪರವಿಧು ವಿನಮಿತ
ಸಾಮಸಂಭವಗಾನವೀಸ
ಶರ್ವ ಸರ್ವ ಮಹಿತ ॥ ೧ ॥

ವೀಚಿಮಾಲಿ ತೂಣೀರಕ
ವಿಹೃತ ವಿರಾಮ ವಿಗತ ಬಾಣ
ವೀಚಿಮಾಲಿಯೇಕ
ಯಜ್ಞ ವಿಘ್ನನಾಶ ಸುಹಿತ ॥ ೨ ॥

ವಿಶದೈನಿಲಯೇಶ ಚೆನ್ನ
ವೀರೇಶಪ್ರತಿಮ ಭೇಶ
ವಿಶದ ವಿಗ್ರಹ ಪ್ರತರ್ಕ
ವಿಶ್ವರೂಪ ಸಹಿತ ॥ ೩ ॥

೧೮

ಮೂಲಮಂತ್ರಾಂಗಾಷ್ಟಮೂರ್ತಿ ಸಲವೆನ್ನ
ಮೂಲೋಕಗಳನಾಳ್ವ ಮುನಿಜನವರೇಣ್ಯ ॥ ದ್ರು ॥

ಪ್ರ[೨][ಥುವಿಯ][೨] ರಥಮಾಡಿ ಶ್ರುತಿ ತುರಗಗಳ ಹೂಡಿ
ಚತುರಾಸ್ಯನಂ ಸಾರಥಿಯನು ಮಾಡಿ
ಮಿತವಿಲ್ಲದೆ ಪಂಚಮದಿ ಮೆರೆವ ಮುಪ್ಪೊಳಲುಗಳ
ಮಥನಮಾಡುತೆ ಸುಟ್ಟ ಮಹಾದೇವ ॥ ೧ ॥

---

೧-೧ ಮವ (ಮೂ).
೨-೨ ಥಮವೆ (ಮೂ)

ದ್ವಿತೀಯ ರೂಪವನುಳ್ಳಸತಿಯೆ ಶಿರದೊಳು ತಾಳ್ದ
ಕ್ಷಿತಿನಾಥನಪ ಭಗೀರಥನ ತಪಕೊಲಿದು
ಪಿತರುಗಳು ಮಡಿದಿರಲು ಪ್ರಾಣಗಳ ಕೊಟ್ಟು ವಸು
ಮತಿ ಜನರನುದ್ಧರವ ಮಾಡಿದ ಮಹೇಶ ॥ ೨ ॥

ತೃತೀಯಾಕ್ಷದಿಂ ಸೂರ್ಯತನಯನಂಗವ ದಹಿಸಿ
ಯತಿ ಮೃಕಂಡನ ಸುತನ ಯೋಗದೊಳು ನೆಲಸಿ
ರತಿದೇವಿ ಬಂದು ತನ್ನ ರಮಣನ ಬೇಡೆ ಪಾ
ರ್ವತಿಯ ಲಗ್ನದಿ ಪ್ರಾಣವನು ಕೊಟ್ಟ ಶಂಭೋ ॥ ೩ ॥

ವೇದಾಂಗ ಮಿತ್ರರು ಏಳು ಕಣ್ಣುಳ್ಳ ಭವ
ವೇದಾಂಗ ಹಿತಗೆಯ್ಯುವೆರೆದತಿಯ [?] ಯ
ವೇದಾಂಗ ಮುಖನೆಯ್ಯ ವೇದಾಕ್ಷ ಫಣೆಪೆದೆಯ
ವೇದಭುಜ ನಯನಡಿಯ ವ್ಯೋಮಕಚದುಡಿಯ ॥ ೪ ॥

ಅಷ್ಟಮಾಂಗವನಿತ್ತು ಅಖಿಳರನು ಪಾಲಿಸುತೆ
ಅಷ್ಟದಿಕ್ಕುಗಳೆಯಂಬರವೆ ಮಾಡಿ
ಶಿಷ್ಟಪಥದ್ಯೆನಿಲಯ ಶಿವ ಚೆನ್ನವೀರೇಶ
ಕಷ್ಟಗಳ ಪರಿಹರಿಸಿ ಕರುಣದಿಂ ನೋಡಿ ॥ ೫ ॥

೧೯

ಮಹಿತ ಶ್ರೀಗಿರಿನಾಥೇಶ
ಮಾಮಕ ಮಹೇಶ
ಸುಹಿತಭವ ವಿಶ್ವಭರಿತ
ಸುರುಚಿರ ಸಚ್ಚರಿತ ವಿಭೋ ॥ ಪ್ರ ॥

ಗೋಮಿನಿರಮಣ ರುಚಿ
[೧] [ತಾಮರಸ][೧] ಸಚರಣ
ವಾಮದೇವ ಭೀಮಾವ್ಯಯ
ಮಾಮಕ ಹೃದ್ಧಾಮ ವಿಭೋ ॥ ೧ ॥

---

೧-೧ ರಾಮಸ (ಮೂ)

ನಾಕವಿಚಿಕುರ ನವ
ರಾಕಾಂಗಧರ
ಕೋಕಹಿತ ಸ್ತೋಕಾಯುಧ
ಶ್ರೀಕರ ಲೋಕೈಕ ವಿಭೋ ॥ ೨ ॥

ಸೂರತಸುಕೃತ ಗಣ
ವಾರ ಸಸ್ನುತ
ಸಾರ್ಯನಿಲಯಾರ್ಯ ಚೆನ್ನ
ವೀರೇಶ ವಿಚಾರ ವಿಭೋ ॥ ೩ ॥

೨೦

ಶ್ರೀರಮಾಶುಗ ಭರ್ಗ ಪುನರ್ಭವ
ಶ್ರೀರಮಾ ಮಾಮಕದೇವ
ಸಾರ ಮಾನಿತ ಸನ್ಮುನಿ ಸಮುದಯ
ಸಾರ ಮಾಮಕ ಮಾನ ವಿರಾಮ ॥ ಪ್ರ ॥

ಮಾಧವಾಪ್ತ ಶಬರ ವಿದ್ಯದು
ಮಾಧವ ಭರ್ಮಾಚಲ ಕಾರ್ಮುಕ
ಮಾಧವಾನ್ವಿತ ಮಾರ ಪರಾಪ್ರತಿ
ಮಾಧವಾ ಬರಗೋ
ಗೋಧವಧ್ವಜ ಗೋಧವೇಂದ್ರನುತ
ಗೋಧವ ಧ್ವಜ ಗೋಶ್ರುತಿಧರ ಧರ
ಗೋಧವಖಿಳ ಗೋಧವ ಸೇವಿತ
ಗೋಧವಧ್ವರ ಪಾಲನಶೀಲ ॥ ೧ ॥

ಕಂಧರಾವಳಿಸನ್ನಿಭ ಮೇಚಕ
ಕಂಧರ ವಿಧುರ ವಿಶಿಖ ಮಾರುತ
ಕಂಧರಾತ್ಮಾಂಗಮರ ತಟಿನಿ
ಕಂಧರ ಕರ್ಷ
ಸುಂದರಾಚಲ ದುಹಿತಾರ್ಥ ತನು
ಸುಂದರ ನೇತ್ರಾಯುಧ ವಿಮಲ ವ

ಸುಂದರ ಸ್ಯಂದನ ನಿಗಮಾಶ್ವ ವ
ಸುಂಧರಾಂಚಿತ ಪಸ್ತ ಮಹೇಶ ॥ ೨ ॥

ತಾರಕಾವರಶೇಖರ ಶಂಕರ
ತಾರಕಾಹಿತ ತಾತ ಭವಾಂಬುಧಿ
ತಾರಕ ಕರುಣಾರಸಯುತ ದೃಕ್
ತಾರಕ ಪರಿಣೋ
ದ್ಧಾರಕ ಮಿತ್ರೋತ್ಕಟ ವಿಘ್ನವಿ
ದಾರಕ ಶುಭದೈನಿಲಯ ಬೃಂ
ದಾರಕಾರ್ಚಿತ ಪದ ಕವಿಜನ ಮಂ
ದಾರಕ ಚೆನ್ನವೀರೇಂದ್ರ ॥ ૩ ॥

೨೧

ಭಜರೆ ಭಜರೆ ಮಹಾದೇವ ತ್ವಂ
ಭುಜಗಹಾರಂ ವಿಷಗ್ರೀವಂ ॥ ಪ ॥

ಕಮಲಜ ಭಾವಶಿರಪಾತ್ರಂ
ದಮುನರೇತಂ ಶುಚಿಗಾತ್ರಂ
ಹಿಮಕರಾನಲ ರವಿನೇತ್ರಂ ॥ ೧ ॥

ದಿವಿಷದ ನುತಕ್ರಮಪದ್ಮಂ
ಪ್ರವಿಮಲ ಯಮಿಮನಸದ್ಮಂ
ಸವಿತೃಜ ಕೃತ ಕರ್ಮಛದ್ಮಂ ॥ ೨ ॥

ಗಿರಿಜಾಸ್ಯಂಭೋಜ ಸೂರ್ಯಂ
ಸ್ಫುರಿತೈನಿಲಯ ನಿಕಾಯ್ಯಂ
ವರಗುರು ಚೆನ್ನವೀರಣಾರ್ಯಂ ॥ ೩ ॥

೨೨

ಪಾ^೧ [ಲಿಸಯ್ಯ]^೧ ವಟಪಾದ ಪಾ^೨[ಲಿಸಯ್ಯ]^೨ಧೀಶ
ಫಾಲನಯನ ಗೌರೀಪತಿ ಪರಮೇಶ ॥ ದ್ರು ॥

ರಾಜೀವ ಫಾರಿಜಾತ ವೇಷ್ಟ
ರಾಜೀವಾಂಗ ವಿರಾಜಿತ ವೇಷ್ಟ ॥ ೧ ॥

ಜಂಬೂನದ ನಗೋಜ್ವಲ ಕೋದಂಡ
ಜಂಬೂಕಾಲಮೇಘದಿ ದೋರ್ದಂಡ ॥ ೨ ॥

ಅಬ್ಜಾರ್ಯಮ ಶಿಖಿಯಾಕ್ಷ ಸುಧೇಶ
ಅಬ್ಜ ಕರ್ಪೂರಾರ್ಚನಾಂಗ ಮದೀಶ ॥ ೩ ॥

ಪದ್ಮಸದ್ಮಜ ಪರಪ್ರಮಥೇಂದ್ರ
ಪದ್ಮಸದ್ಮಾಮರಪಟಲ ರಾಜೇಂದ್ರ ॥ ೪ ॥

ಚತುರೈನಿಲಯಾರ್ಯ ಚೆನ್ನವೀರೇಶ
ವಿತತ ಕಂದರಪುರ ವಿಭು ಪರಮೇಶ ॥ ೫ ॥

೨೩

ಫಾಲಾಕ್ಷ ಬಾರ ಕೇಶಪಾಹಿ ಗೌರೀಶ
ಲಲಿತ ಚಲಿತ ಮಲೆತ ಕಲಿತ
ಶೂಲವ್ಯಾಲ ಮಾಲಲೋಲ ಕೋಲಜಾಲಹಾಲನೆ ॥ ದ್ರು ॥

ಚಾಮೀರಕ ಗೋಕೋದಂಡ
ರಾಮನಾಗ ಮಾರ್ತಂಡ
ಜೀಮೂತೇಶ ಗೋಪ್ರಚಂಡ
ಅಮಿತಾಭ್ರಮಿತ ಗಮಿತನಮಿತ
ಸೋಮವಾಮ ಪ್ರೇಮ ಭೀಮ
ರಾಮ ರಾಮಗ್ರೀವನೇ ॥ ೧ ॥

---

೧-೧ ಲಯ (ಮೂ)
೨-೨ ಲಯ (ಮೂ)

ಜಾತವೇದ ಸುರೇತ
ಮಾತಂಗಾನನ ತಾತ
ಭೂತಸಂಘಾತ ನಾಥ
ಪ್ರತೀತ ಪತಿತ ಪತಿತ ನುತಿತ
ಧಾತ ಭೂತಜಾತ ಸೂತ
ಭ್ರಾತರೇತ ಪ್ರೀತನೆ ॥ ೨ ॥

ವಾಸವಾರ್ಚಿತ್ಯನೆಲೆಯ
ವಾಸ ಚೆನ್ನವೀರೇಶ ಹರಿಯ
ವಸನ ಕಾಕೋದರವಲಯ
ಅಸುರ ವಿಸುರಾಯ ಸರ
ಕಸರ ಪೋಷ ಪೂಷ ಭಾಷ ಭೀಷ
ದೋಷನಾಶ ಈಶನೆ ॥ ೩ ॥

೨೪

ಶಂಕರ ಸಾಂಬಶಿವ ಮಾಮಕ ನಿರಾ
ತಂಕ ಶೋಭಾಂಕ ಮೃಗಾಂಕಶೇಖರ
ಶಂಕರ ಸಾಂಬ ಶಿವ ॥ ಪ ॥

ಮಾನಂದನಾಂಗ ವಿದಾಹನ
ಅಸಮಾನಾದಿವೃಷಭ ವಾಹನ
ವಿಧಿ ವನಜಾಕ್ಷ ಸುರೇಂದ್ರ ಸೇವಿತ ॥ ೧ ॥

ವಾರಣಸುರಮದ ಭಂಜನ
ಅಘವಾರಮುದಿರ ಪ್ರಭಂಜನ
ಘನಸಾರ ಡಿಂಡೀರ ತುಷಾರ ಶುಭ್ರಾಂಗ ॥ ೨ ॥

ಜಾತ್ಯನಿಲಯ ಪುರೀಶ್ವರ
ಗಣಜಾತಾಢ್ಯ ಚೆನ್ನವೀರೇಶ್ವರ
ಪರಿಪೂತ ಪ್ರಭೂತ ಪ್ರಖ್ಯಾತ ಮಹೇಶ ॥ ೩ ॥

೨೫

ವಾರಿನಿಧಿ ತೂಣ
ವಾರಿಧರ ಗ್ರೀವ ಮಾಮಕ ಮಹಾಪ್ರಾಣ || ದ್ರು ||

ಪಾಕ ಸುಧಾಕರ
ಪ್ರಕಟಿತ ವೇಷ್ಟಾಹಿಂದ್ರಹಾರ
ನಾಕ ಕುಂತಲ ಕಲುಷ ವಿದೂರ || ೧ ||

ಪಾತಕವ್ರಜ ವನ
ಪಾದಪಾಶನ ವೃಷಗಮನ
ಜಾತವೇದಾಕ್ಷ ಧರನ || ೨ ||

ರಾಜಿತೈನಿಲಯ
ರಾಜ ಚೆನ್ನವೀರೇಶ್ವರ ಸದಯ
ಐಜನಾಗ್ರಣಿ ಪ್ರಮಥ ನಿಕಾಯ || ೩ ||

೨೬

ಕಾಯಜದರ್ಪ ವಿಭಂಗ
ಕಾಯೋ ಕಾಯೋ ಕೃಪಾಂಗ || ದ್ರು ||

ಅತುಲಮಹಿಮ ಪುರ ಮಥನ ಶುಭ್ರಾಂಗ
ಪೃಥುಲಘ ತಿಮಿರ ಪತಂಗ
ಮಚ್ಛೇತಾಂಬುಜ ಭೃಂಗ || ೧ ||

ಮೇರುಶರಾಸನ ಧಾತ್ರಿ [೧][ರಥಾಂಗ][೧]
ಪಾರಾವಾರ ನಿಷಂಗ
ಭವ್ಯನಿಗಮ ತುರಂಗ || ೨ ||

ನಿರುತೈನಿಲಯ ಶ್ರೀ ಸೋಮೋತ್ಸಂಗ
ಗುರು ಚೆನ್ನವೀರಾರ್ಯಗಂಗ
ಮಕುಟಿ ಸುಜನ ಸುಸಂಗ || ೩ ||

---

೧-೧ ಶತಾಂಗ (ಮೂ)

## ೨೭

ಶಂಕರ ಪಾಹಿ ಶಂಭು
ಕಾರುಣ್ಯನಿಧಿ ಸರ್ಪಾಲಂಕಾರ ಕೃಪಾಕರ ॥ ಪ್ರ ॥

ಪಾರಾವಾರ ಬಾಣಗೇಹ
ಮಾರಮಣ ಶುಕ
ಮೇರುಧನ್ವಂಭೋಜಜಾತಸೂತ ಭೂವರೂಥ ॥ ೧ ॥

ರಾಜಾನಲ ಗ್ರಹರಾಜ ನೇತ್ರ
ರಾಜೀವಶರಯಾತ
ರಾಜಕಿರೀಟ ಪ್ರಮಥೇಂದ್ರ ಸತ್ಯಸಾಂದ್ರ ॥ ೨ ॥

ಪೂತೈನಿಕೇತನಾರ್ಯ
ನಾಥ ಚೆನ್ನವೀರೇಂದ್ರ
ವೀತ ವಿಕಾರ ಸ್ವರ್ಗಧಾಮ ಸಾರ್ವಭೌಮ ॥ ೩ ॥

## ೨೮

ರಾಜಮೌಳಿ ಮಹಾದೇವ
ಭೂತನಾಯಕ ವಿಬುಧ ವಿನುತ
ಸರ್ವದಾ ಮಾಂ ಪಾಲ ಶ್ರೀಗೌರಿಕಾಂತ ॥ ಪ ॥

ದಾನವಾರಿ ಪ್ರಿಯಗೋಪ
ಯಾನಾದ್ರಿ ಕೋದಂಡಪಾಣಿ
ಮೀನಾಂಕಾರಿ ಮಂತ್ರಮೂರ್ತಿ ಗಂಗಾಧರ ॥ ೧ ॥

ಶಾತಕುಂಭೋದಯದೇವ
ನಾಥಗಣ ವಿನುತ ಪಾಲ
ರೇತಮಂದರೂಪ ರೌಪ್ಯಶೈಲಗಾರ ॥ ೨ ॥

ರುಚಿರೈನೆಲೆಮಂದಿರ ದಿವ್ಯ
ಶುಚಿವಿಗ್ರಹ ಚೆನ್ನವೀರೇಶ
ಅಚಲಮೋಕ್ಷ ಸೌಖ್ಯದೇಹಿ ನಿರ್ವಿಕಾರ ॥ ೩ ॥

೨೯

ಪಾಹಿ ಶಂಕರ ಶಿವಸುಖಧಾಮ
ದೇಹಿ ಮೇ ಪರಾಭಿರಾಮ ॥ ಧ್ರು ॥

ಶಾತಕುಂಭಾಚಲ ಕೋದಂಡ
ಭೂತಮಂಡವನ ವೇದಂಡ ॥ ೧ ॥

ಮಾಯಾಪಾತ ವಿರೋಚನ
ಮಾಯಾಪಾಶ ವಿಮೋಚನ ॥ ೨ ॥

ಕೃಪಾವೀಚಿಮಾಲಿ ಸಾಂಬ
ಭವಭೃದಘ ಶೈಲ ಶಂಬ ॥ ೩ ॥

ದುಷ್ಟಾರಿಷ್ಟ ದುಃಖವಿನಾಶ
ಶಿಷ್ಟಾನಂದ ಜಿತಕೀನಾಶ ॥ ೪ ॥

ಚೆನ್ನವೀರಾರ್ಯ ನಿರ್ವಿಕಾರ
ಸನ್ನುತೈನಿಲಯ ನಿಕಾಯ ॥ ೫ ॥

೩೦

ಹೇ ಅಭವಾ ಮಹೇಂದ್ರಕಟಕ
ದೇಹಿತವ ಪಾದಾಂಬುಜ ಭಜನಂ
ಶ್ರೀನಗಜಾಮನೋಹರ ನಿರುತಂ ॥ ಪ ॥

ಜನ್ಮ ಜರಾಮಯ ಭಯವಿದೂರ
ಮನ್ಮಾನಸಕಾಸಾರ ರಾಜಮರಾಳ ॥ ೧ ॥

ಪತಿತಪಾವನ ಗುಣಗಣಭರಿತ
ಯತಿಜನ ವರದ ಸುಚರಿತ ನಿರ್ವಿಕಾರ ॥ ೨ ॥

ರುಚಿರೈನೆಲೆನಿಲಯಸ್ಥಿತ ಸಾರ
ಪ್ರಚುರಮೂರ್ತಿ ಚೆನ್ನವೀರಾಚಾರ್ಯ ವೃಷ ॥ ೩ ॥

೩೧

ಪಾಲಿಸಯ್ಯ ಪಾರ್ವತೀಶ
ಮಾಲಿಸಯ್ಯ ಮಾಮಕೇಶ ॥ ಪ್ರ ॥

ಭಾಳ ಜನ್ಮ ತಾಳಿ ಬಂದೆ
ಬಂಧನಾವಲಂಬದಿಂದೆ
ಆಳಿಗೊಂಡಳಲ್ದು ನೊಂದೆ
ಆದರಿಸಿ ನೋಡಿ ತಂದೆ ॥ ೧ ॥

ನೇಮ ಯೋಗ ನಿಷ್ಠೆ ಬಿಟ್ಟೆ
ನಿಷ್ಠುರಹಂಕಾರ ತೊಟ್ಟೆ
ಕಾಮಿನಿಯೊಳಿಚ್ಛೆಯಿಟ್ಟೆ
ಕಾಮನಂಬಿನಿಂದೆ ಕೆಟ್ಟೆ ॥ ೨ ॥

ಶ್ರೀಕರ್ಯನೆಲೆನಿಕಾಯ್ಯ
ಶ್ರೀಶ ಚೆನ್ನವೀರಣಾರ್ಯ
ಪಾಕನೆಂದೀಕ್ಷಿಸಿಯಾರ್ಯ
ಪಟಲದಾಳೆನಿಸುವಾರ್ಯ ॥ ೩ ॥

೩೨

ಭಜರೆ ಶಂಭು ಪಾದಾಬ್ಜ
ಸುಜನ ಹೃತ್ಕುಮುದಾಬ್ಜ ॥ ಪ ॥

ಕಲ್ಯಾಣಾದ್ರಿ ಕೋದಂಡ
ಕದಳಿ ವೇದಂಡ ॥ ೧ ॥

ಪರತರಮೋಕ್ಷ ಪ್ರದಾಯಕ
ಮರುದಾಪ್ತೇಕ್ಷಣ ಸಾಯಕ ॥ ೨ ॥

ಅಮಿತಜ್ಯೋತಿ ಚಿದಾಕರ
ಯಮಿಜನಹೃದಯ ಸದಾಕರ ॥ ೩ ॥

ಗಿರಿಜಾಸ್ಯಾಂಭೋಜ ಮಿತ್ರ
ವರವೈಶ್ರಮಣ ಸುಮಿತ್ರ ॥ ೪ ॥

ನಿರುತ್ಯನಿಲಯ ನಿವೇಶ
ವರದ ಚೆನ್ನವೀರೇಶ ॥ ೫ ॥

೩೩

ಸ್ಮರಾರಿತ್ವಂ ಶಿವನಾಮ
ಪರಿಣ ವಿಧುಕ ರುಚಿರಾಮ ॥ ದ್ರು ॥

ಶಾವಕಹಿಮಕರ ಭೂಷ
ಸೇವಕಜನ ಪರಿತೋಷ
ಪಾವಕಜಾತ ಸುವೇಷ
ತಾವಕ ಭಕ್ತತಮ ಪೋಷ ॥ ೧ ॥

ರದನಾಯುಧ ಗುಹತಾತ
ಮದನವಿಕಾರ ವಿಧೂತ
ವದನಸ್ರಗ್ಧರ ಖ್ಯಾತ
ನಿಧನಾದ್ರಿಪ ಪರಿಪೂತ ॥ ೨ ॥

ಪರಮೈನಿಲಯ ಪುರೇಂದ್ರ
ಪರಿಭವನಾಗಮೃಗೇಂದ್ರ
ಪರಿಪಾಲನ ಗುಣಸಾಂದ್ರ
ಪರತರ ಚೆನ್ನವೀರೇಂದ್ರ ॥ ೩ ॥

೩೪

ಭವಹರ ನೀಲಗ್ರೀವ
ಮಾಮಕ ಶಿವಶಂಕರದೇವ
ಅವನಿಧರೇಂದ್ರಸುತಾಸ್ಯಾಬ್ಜಾರ್ಯಮ
ದಿವಿಜಪತಿ ವಿನಮಿತ ಪದರಾಜೀವ ॥ ದ್ರು ॥

ಪಾಕಸುಧಾಕರ ಭೂಷೆ ವಿಧಿ
ಪಾಕಹರಾಚ್ಯುತ ಪೋಷ್ಯ
ಸಾಕಚಿಕುರ ಶರನಿಧಿ ಶರನಿಧಿ ಧೃತ
ಕಾಕೋದರ ವರಧರ ಹೃತದೋಷ ॥ ೧ ॥

ಕಾಂಡರುಹಾಶುಗ ವಿಜಯ ಹರಿ
ಕಾಂಡ ಭೂಧ್ರಧನು ವಿಜಯ
ಕಾಂಡಪ್ರವ ಡಿಂಡೀರಾಖಂಡಲ
ಶುಂಡಲಾರ್ಣವ ಪಾಂಡುರ ಕಾಯ ॥ ೨ ॥

ಭಾನುಪ್ರಭಂಜನ ಮಿತ್ರ ಹಿಮ
ಭಾನುಗೋಧನ ಮಿತ್ರ
ಮಾನಿತ್ಯನಿಲಯ ಚೆನ್ನವೀರೇಶ್ವರ
ಮಾನ ಪ್ರಿಯ ಭವಸಾಗರ ಚೈತ್ರ ॥ ೩ ॥

೩.೫

ಸೋಮೇಶ ಸಮವಿಭು ಮಹೇಶ
ಶ್ರೀಮದುಮಾಶೈಲ ನಿವೇಶ
ಸದಯ ಹೃದಯಾಭ್ಯುದಯ ವಿವಯ ॥ ಧ್ರು ॥

ಧವಲಕಲೇವರಧರ ವರಾಗಾರ
ಶಿವಗೌರೀಶ ಶ್ರೀಗೌರೀಶ
ಕವಿವಾರೇಶ ಕರುಣಾವೇಶ ॥ ೧ ॥

ವರುಣೋಕ ಶರಧಿ ವರಘೃಣಾ ಶರಧಿ
ಉರಗೋಪಾಕ್ಷ ಖಲವಿಪಕ್ಷ
ಪುರಹೃದಕ್ಷ ಪ್ರಮಥಾಧ್ಯಕ್ಷ ॥ ೨ ॥

ಸಾರೈನಿಲಯಾರ್ಯ ಚೆನ್ನವೀರಾರ್ಯ
ಧೀರೋದ್ಧಾರ ದೀನಾಧಾರ
ವೀರಾಕಾರ ವಿದ್ಯಾಚಾರ ॥ ೩ ॥

೩೬

ಶ್ರೀಗೌರೀಧವ ಮೋಕ್ಷಸುಖಧಾಮರೆ
ಜಯ ಸಂತತಮಭಿರಾಮರೆ ॥ ಪ ॥

ವಿಷದಪಘನದೇವ ವಿಸರಪೂಜಿತ
ಅಸಮ ಸುಜನಮಂದಾರರೆ ॥ ೧ ॥

ಜಿತಸಮವರ್ತಿ ಭವಸಾಗರ ಚೈತ್ರ
ಪ್ರತಿಹೃದಯ ಸಂಚಾರರೆ ॥ ೨ ॥

ಅನವರತೈನೆಲೆಪುರ ರಾಜೇಂದ್ರ
ಘನಗುರು ಚೆನ್ನಪೀರಾರ್ಯರೆ ॥ ೩ ॥

೩೭

ಸಂವತ್ಸರವರಶೇಖರ ಶುಭಕರ
ಸಮವ (?) ಶ್ರೀಮಹೇಶ
ಸಂವತ್ಸರಮುಖ ಸುರಗಣ ಮುನಿಗಣ
ಸೇವಿತ ಗಿರಿಜೇಶ ॥ ಧ್ರು ॥

ಸಂವತ್ಸರತನುದಹನ ಶಂಕರ
ಸಂವತ್ಸರ ಗಾತ್ರ
ಸಂವತ್ಸರ ಪವಮಾನಮಿತ್ರ ಹಿಮ
ಸಂವತ್ಸರ ನೇತ್ರ
ಸಂವತ್ಸರ ಶರದಾಯಕ ವಿಧಿಸುತ
ಸಂವತ್ಸರ ಮಿತ್ರ ॥ ೧ ॥

ಸಂವತ್ಸರ ಮದಸಂಹರಕೃತ ಘನ
ಸಂವತ್ಸರ ಜಾಲ
ಸಂವತ್ಸರ ಮಂಗಳಮಯ ದಶಕ
ಸಂವತ್ಸರ ಪಾಲ

ಸಂವತ್ಸರ ಪತಿಗಾನವಿಲೋಲ
ಸಂವತ್ಸರ ವಾಲ ॥ ೨ ॥

ಸಂವತ್ಸರ ಕರಶಮನ ಕೃತ್ಯ ಬಹು
ಸಂವತ್ಸರ ವಿಜಿತ
ಸಂವತ್ಸರ ಸುಖದೈನಿಲಯಾಧಿಪ
ಸಂವತ್ಸರ ವಿನುತ
ಸಂವತ್ಸರ ಗುರುಚೆನ್ನವೀರ ವಿಭು
ಸಂವತ್ಸರ ಮಹಿತ

೩೮

ಶ್ರೀವಿನೀತೇಶ ದೇವ ಮಾಮಕಾನಿಶಂ
ಶ್ರೀವಿರೂಪಾಕ್ಷ
ಭಾವಭಾವ ಪರತರ ಪಂಚಾನನ
ದೇವದೇವ ವಿಜಿತಾಕ್ಷ ಪರತ್ವ
ದೇವದೇವ ಸಜ್ಜನ ತಪದರ
ಜೀವಜೀವ ನುತಗುಣರತ್ನಾಕರ ॥ ಪ ॥

ಗೋಪಪತ್ರ ಗೋಗೋಭವ ಧೃತ ಕಂಧರ ಶಾಶ್ವತ
ಗೋಪ ತನುಭವ ಶರದ ಶರದ ರುಚಿಕಂಧರ
ಗೋಪವಿಪಕ್ಷ ಹರಿಣಸದೃಶ ಗೋಮಂದಿರ ಪರತರ
ಗೋಪಜಯ ವರದ ಕೃಪಾಂಬುವರ ಮಂದಿರ
ಗೋಪಗೋಪಚಕ್ರ ಖಸ್ಯಂದನ
ಗೋಪಚಾಪ ಶರನಿಧಿಕೃತ
ಗೋಪದೋಪ ಫಣಿಗುಣ ನಿಗಮಾಶ್ವಸು
ಗೋಪಸೂತ ಖಗಪುಟ ಭೇದನಹರ ॥ ೧ ॥

ಕ್ರತುಭುಜ ಪಥಕಚ ಪೃಥುಕ ತುಹಿನಕರಶೇಖರ ಶಂಕರ
ಪ್ರಥಿತ ಪ್ರಮಥ ಹೃತ್ಕುವಲಯ ವಿಕಚ ಸುಧಾಕರ
ವಿತತ ಜಿತಾಕ್ಷ ಸುತತಿ ನತಕ್ರಮ ಹಂಸಾಕರ ಭವಭಾ
ಶ್ರಿತ ಭೂ [ಧ] ರ ಖಗಕಾತ್ಮತ್ರನು ಸಾಕರ

ಕ್ರತುಮಥನ ಪ್ರತಿಮತುಲ ಮಹಿಮರ್ಯೆ
ಪತಿಹಿತ ದಿತಿಸುತ ಕ್ಷಿತಿ ಭೃತು ಭಿತುಪವಿ
ಜಿತ ಕೃತಾಂತ ಕರ್ತಪ ರಥ ದರ್ಪವಿ
ಹೃತ ಶತಧೃತಿಸುತ ಪ್ರಿಯ ಸಾರಗೇಯ ॥ ೨ ॥

ಶಾರದಾಂಬುನಿಧಿ ನೀರದಾಂಬುಜ ಜರಾರಕ ಹಿಮಘನ
ಸಾರಗೌರನಿಭ ಯಶೋವಿಸುತ ಬೃಂದಾರಕ
ತಾರಾಪಥ ತಟಿನಿ ಕೋಟೀರ ವಿನಾಯಕ
ದಾರುಣರುಜಶಾದಾರುಣ ಖೇದ ನಿ
ವಾರಣ ವಾರಣ ಚರ್ಮಧರ ಕವಿ
ವಾರ ಸುವಾರಾಕಾರ ಪೂರ್ಣವಿಧು
ಸಾರ ಮನ್ಮಾನಸವಾರಿಜ ಮಧುಕರ ॥ ೩ ॥

೩೯

ಭೋಭೋಗೇಶ ಶುಭೋದಯ ಕನದುಮಾ
ಭೂಧರ ದಿವ್ಯನಿವೇಶ ಭೋಭೋಗೇಶ ॥ ಧ್ರು ॥

ಮಿತ್ರಾಬ್ಜಾಶುಗ ಮಿತ್ರ ಗೋಧನದ
ಮಿತ್ರ ಪಂಚವದನ ನೇತ್ರಾಯುಧ ರವಿ
ನೇತ್ರ ಪೀತಾರುಣನೇತ್ರ ಸಾಂಬ ವದನ
ಗೋತ್ರಸ್ಯಂದನ ಗೋತ್ರ ಶಿರಾರ್ಕಗೋತ್ರ ಶಿಖರ ಸದನ
ಸತ್ರಚರಾಧಿಪ ಸತ್ರಪಸುರಮುನಿ
ಸತ್ರದ ದೈತ್ಯ ವಿಚ್ಛೇದನ ಭೋಭೋಗೇಶ ॥ ೧ ॥

ಮಧುಪ್ರಿಯ ಗುಣಪರ ಮಧುಪ್ರಿಯ ಶರಧರ
ಮಧುಪ್ರಿಯಾಖಿಲ ಮಹಿತ ಪ್ರದರ ಘೋರಭವ
ಪ್ರದರನಾಶ ವಿಧು ಪ್ರದರ ಸುಜನ ಸುಹಿತ
ನಿಧಿ ವಿರಹಿತ ವಸುನಿಧಿ ನಿಯುಕ್ತ ಜಲ
ನಿಧಿ ಶರನಿಧಿಸಹಿತ ಬುಧಜನಪ್ರೀತ ವಿ
ಬುಧ ವಂದಿತ ಮಹಾಭ್ಯುದಯಾಕರ ಗಣಸೇವಿತ ಭೋ-
ಭೋಗೇಶ ॥ ೨ ॥

ಪವನಪಥಾಮೃತ ಪವನವಿನುತ ಪಾಪವನಧಿತಾರಣ
ನಾವ ಭುವನದರಗಲ ಭುವನವಿಧೃತ ಸುರ
ಭುವನೋದ್ಧಾರ ಭಾವಕವಿಮುಖಗ್ರಹನುತ
ಕವಿಗಣಹಿತವರ ಕವಿಶಾಬಕ ಜೀವ
ಭವಹರೈನಿಲಯ ಭವಚೆನ್ನವೀರಾರ್ಯ
ಭವಮೃಡಹರ ಶಿವಮಾಮಕ ಭೋಭೋಗೇಶ ॥ ೩ ॥

## ೪೦

ಶ್ರೀಶೈಲೇಶ ಸರ್ವೇಶ ಶ್ರೀಮೋದನೀಪುರ ನಿ
ವೇಶ ಮಲ್ಲೇಶ ಪಾಲಿಸು
ಭೇಶ ಭೇಶ ಶಿಖಿನೇತ್ರ ದುಷ್ಟಕೀ
ನಾಶ ನಾಶ ಮಹಿಮಾಢ್ಯ ಗಿರೀಶ ಸು
ರೇಶ ರೇಶ ನುತಕೋಟಿಸೂರ್ಯ ಸಂ
ಕಾಶ ಕಾಶ ಭ್ರಮರಾಂಬ ಮನೋರಮ ॥ ಪ ॥

ವಾಸವನಂದನ ಶರದಶರಧಿ ಘನ ತೂಣನೆ । ಕೃತ್ತಿ
ವಾಸ ವಸುಧರ ಶರಾಸನ ಕರ ವಿಧು ಬಾಣನೆ
ಭಾಸುರ ತುಂಬುರ ನಾರದಗಾನ ಧುರೀಣನೆ । ಮತ್ತೆ
ಭಾಸುರ ಮದಪ್ರಭಂಜನ ಭಕ್ತತ್ರಾಣನೆ
ದೋಷ ದೋಷ ಭಾಸ್ಕರ ಭವ್ಯಾಕರ
ಭೀಷಣ ಕಷ್ಟಮಯ ಭಯಸಂಹರ
ದೂಷಣಕರ ದುರ್ಜನಚಯ ಪ್ರಹರ
ತೋಷಾನ್ವಿತ ಶುಭಕರ ಶಿವಶಂಕರ ॥ ೧ ॥

ದಕ್ಷಮುಖಕ್ಷಯ ಮಹಾನಂದಮಯ ದೇವನೆ । ಸುಮಹಾ
ದಕ್ಷ ಮಹಿಕಾರ್ಜುನ ಮಾಮಕ ಸಂಜೀವನೆ
ಪಕ್ಷ ಪ್ರಮಥಗಣಾರ್ಚಿತ ಪದರಾಜೀವನೆ । ದಿವಿಜವಿ
ಪಕ್ಷ ದೈತ್ಯ ಸಂಘಾತ ಪ್ರಭಾವನೆ
ನಕ್ಷತ್ರೇಶ್ವರ ಮಕುಟ ಪ್ರಕಟಿತ
ಉಕ್ಷೇಶ್ವರ ವಾಹನ ಸರ್ವಗ ನಿಟಿ
ಲೇಕ್ಷಣ ಖಪುರಭೇದನ ಗೌರೀ
ಸುಕ್ಷೇಮಾಕರ ಪರಮ ಚಿದಾಕರ ॥ ೨ ॥

ಶತಧೃತಿ ನಂದನತಿಹಸ್ತ ಘನ ಶೌರ್ಯನೆ
ಶತಪರ ಶತಸಂಖ್ಯಾಗಣಯುಕ್ತ ಸಭಾಸಂಧುರ್ಯನೆ
ವಿತತ ವಿಶ್ವರೂಪಾದ್ಭುತ ಚರಿತವಾರ್ಯ
ವಿತತ್ಯನಿಲಯಪುರೇಂದ್ರ ಚೆನ್ನವೀರಾರ್ಯನೆ
ಅತುಳಮೋದನಿಪುರ ರಾಜೇಂದ್ರನಿ
ಗತಿ ಸಂಪದ ಮಹದೈಶ್ವರ್ಯವನಿ
ತ್ತತಿಶಯದಿಂ ವೀಕ್ಷಿಸಿ ಸೇವಕನಂ
ಪ್ರತಿಪಾಲನವಂ ಮಾಡು ಮಹೇಶ್ವರ ॥ ೩ ॥

೪೧

ಪಾಹಿ ಸಾಂಬ ಪಾವನ ಡಿಂಬ
ಮೋಹಾಲಂಬ ಮುಕ್ತಾತ್ಮ ಮುನಿನಿಕುರುಂಬ ವಿಶ್ರಂಭ ॥ ಧ್ರು ॥

ಭೇಶಕೋಟೀರಾಂಕ ನಿರಾತಂಕ
ಗಂಗಾವಿಭವಾಂಕ ಭಾಸುರ ಶೋಭಾಂಕ ॥ ೧ ॥

ಕಲಧೌತಾದ್ರೀಶ ಕಲಧೌತಪ್ರಕಾಶ
ನಲನೇತ್ರೇಷ್ಟನಲಜ ಶ್ರೇಷ್ಠ ॥ ೨ ॥

ಸನ್ನುತ್ಯನಿಲಯ ಚೆನ್ನವೀರಾರ್ಯಾಚಲ ನಿಕಾಯ್ಯ
ಮೋಹಾಲಂಬ ಮುಕ್ತಾತ್ಮ ಮುನಿನಿಕುರುಂಬ ॥ ೩ ॥

೪೨

ಶ್ರೀಕಾಳಿಕಾಂತ ಮಾಂ ಪಾಹಿ
ಕಾಕೋದರಧರ ವರದೇಹಿ ॥ ಧ್ರು ॥

ಸತ್ರಾಧಿಪಸಖ ಸಾಗರ ತೂಣ
ಸತ್ರಗೇಂದ್ರ ವಿಧು ಬಾಣ ॥ ೧ ॥

ನೇತ್ರಾಯುಧ ಭಯನಾಶ ಭವಾನೀಶ
ನೇತ್ರಾಂಚಿತ ಪ್ರಮಥೇಶ ॥ ೨ ॥

ವೃಷದ್ವೈನೆಲೆ ಚೆನ್ನವೀರ ಸುಧೀಂದ್ರ
ವೃಷಗಮ ಘೃಣಾ ನದೀಂದ್ರ ॥ ೩ ॥

## ೪೩. ರಾಗ - ಶಾಮಕಲ್ಯಾಣಿ

ಶ್ರೀರುದ್ರಾಣಿ ತುಷಾರಾದ್ರಿಜೆ ನಿನ್ನ
ದಾರಕನ ಪಾಲಿಸೆ
ಭೂರಿ ಭೂರಿಪು ನಿವಾರ ವಾರಣೆ
ಸಾರಸಾರದ್ಯಕೆ ಸಾರಸ್ಮೇರಮುಖೆ ॥ ದ್ರು ॥

ಮಾತೆಯೆ ಮೇನಕಿಯಾತ್ಮಸಂಭೂತಿಯೆ
ಕ್ರೂರಮಯ ಛೇದ ವಿಭೂತಿಯೆ
ಮಹಿಷಾದಿ ದಾನವಭಿಭೂತಿಯೆ
ಸುಪುನೀತಿಯೇ
ದ್ಯೋತ ಗಾತ್ರ ಕಾಳೀ
ವಿನುತ ಖ್ಯಾತಿ ಮಾತೃಕಾಳೀ
ಭಾಸ್ವತಜಾತರೂಪರೇತ ರೇತನಂಗಸ
ಮೇತೆ ಜಾತೆ ಭೂತವ್ರಾತೆ ವಂದಿತೆ ॥ ೧ ॥

ಸುಂದರೆ ಸುರುಚಿರಮಯ ಕಂಬುಕಂಧರೆ
ಕುಲಿಶಾಭದಶನ ರುಚಿ ಬಂಧುರೆ
ಶುಂಭಾಸುರ ಜೈತ್ರ ಧುರಂಧರೆ
ನಗಮಂದಿರೆ
ಸಿಂಧುರಾರಿಗಮನೆ
ಕಲುಷ ಬಂಧನೋಪಶಮನೆ
ಪರಮಾನಂದದಿಂದ ಸಂದ ಸತ್ಯಮೋಹದ
ಕಂದನೆಂದು ಬಂದು ನಿಂದು ಮನ್ನಿಸೆ ॥ ೨ ॥

ಕಾರಣೆ ಕಮಲೋದ್ಭವ ದರ್ಪವಿದಾರಣೆ
ಭವರಂಭೋತ್ಪಾಟನ ವಾರಣೆ

ದುಷ್ಕೃತ್ಯ ಕುತಂತ್ರ ವಿಮರ್ದನೆ
ನಿರ್ದಾರುಣೆ
ಘೋರ ವಿಘ್ನವಿಘೃತೆ
ಯೋಗಿಣಿ ವಾರಸದಾವಿಹೃತೆ
ಐನಿಲಯಾರ್ಯವರ್ಯ ಚೆನ್ನವೀರಣಾರ್ಯನ
ಪಾರಸಾರಸೌಖ್ಯದಿಂದ ರಾಜಿತೆ ॥ ೩ ॥

೪೪

ತಾಯೆ ಶೈಲರಾಜಕುಮಾರಿ
ಕಾಯೆ ಕರುಣದಿಂದ ಗೌರಿ ॥ ದ್ರು ॥

ಕಾತ್ಯಾಯನೀಶ್ವರಿ ಮೃಡಾನಿ
ಸತ್ಯ ಶರ್ವಾಣಿ ಭವಾನಿ ॥ ೧ ॥

ಅಶ್ವಾಹಿತ ದಾನವಜಿತ ಕಾಳಿ
ಶಾಶ್ವದನಿಶಂ ನುತಲೋಕಾಳಿ ॥ ೨ ॥

ರಕ್ತಬೀಜಾಸುರ ಸಂಹಾರಿ
ಶಕ್ತ ಶುಂಭ ನಿಶುಂಭಾರಿ ॥ ೩ ॥

ರಾಮವಾಣಿ ಶಚಿನತಚರಣೆ
ಚಾಮಿೂರಕ ನವರತ್ನಾಭರಣೆ ॥ ೪ ॥

ಚೆನ್ನವೀರಣಾರ್ಯ ಉಲ್ಲಾಸೆ
ಉನ್ನತೈನಿಲಯಪುರವಾಸೆ ॥ ೫ ॥

೪೫

ಕಾಯೆ ಕಾತ್ಯಾಯನಿಯೆ ಎನ್ನ
ತಾಯೆ ಸಿಂಹಯಾನಿಯೆ ॥ ಪ ॥

ಅಂದು ಷಣ್ಮುಖಗೆ ಮುಂತೆ ನೀನು
ಬಂದು ಹಾಲನೆರೆದಂತೆ ॥ ೧ ॥

ಪ್ರಾಲೇಯಾದ್ರಿ ಕುಮಾರಿಯೆ ಎನ್ನ
ಪಾಲಿಸೆ ಕೌಮಾರಿಯೆ ॥ ೨ ॥

ಗತಿ ನೀನೆ ಮೃಡಾನಿಯೆ ಮತ್ತೆ
ಹಿತರುಂಟೆ ಭವಾನಿಯೆ ॥ ೩ ॥

ಬಂಧನಗಳ ನಿವಾರಿಸೆ ನಿನ್ನ
ಕಂದನೆಂದು ತಾರಿಸೆ ॥ ೪ ॥

ರಾಜ ಚೆನ್ನವೀರಾರ್ಯ್ಯಾಸೆ ನೀನೆ
ರಾಜಿತೈನೆಲೆಯ ವಾಸೆ ॥ ೫ ॥

೪೭

ಕುಧರ ವಿಭವ ವರಸುತೆ ಸುಮತಿ ಪಾರ್ವತಿ
ಸದಾ ಮಾಮಕವತ್ವಂ ॥ ಪ ॥

ಶ್ರೀಭಾರತಿ ಶಚಿ ವಿನುತ ಭವಾನಿ
ಶೋಭನಾಂಗಿ ಮಹಿಮಾಂಕ ಮೃಡಾನಿಯವತ್ವಂ ॥ ೧ ॥

ಶುಂಭ ನಿಶುಂಭಾಸುರ ಸಂಹಾರಿ
ಶಾಂಬರಿ ಮನೋರಥ ಪ್ರದ ಗೌರಿಯವತ್ವಂ ॥ ೨ ॥

ಅಭಿನವಾಂಗಿಯ ತನಿಸುಮಗಾತ್ರಿ
ಶುಭಚರಿತ್ರಿ ಖಂಜನಸಮನೇತ್ರಿಯವತ್ವಂ ॥ ೩ ॥

ಅಮಿತಾಭ್ಯುದಯ ಶ್ರೇಣಿ ಕಲ್ಯಾಣಿ
ನಮಿತಜನಾಭಯ ಪಾಣಿ ರುದ್ರಾಣಿಯವತ್ವಂ ॥ ೪ ॥

ಸನ್ನುತೈನಿಲಯ ಪುರೀ ನಿಕಾರ್ಯ
ಚೆನ್ನವೀರೇಶ್ವರ ಸಂಪದ ಧುರ್ಯ ॥ ೫ ॥

೪೭

ಮೃಡಾನೆ ಮೃಗೇಂದ್ರವಾಹಿನೆ
ಮಾಮಕ ಭವಾನೆ
ಷಡಾನನ ನಿಭಾಸ್ಯ ಜನನೆ
ಜಡಾಕರ ಪ್ರಭಾನನೆ ॥ ಪ ॥

ಗಿರೀಂದ್ರ ಮೇನಕಾನಂದನೆ ಗಿರ್ಮೇಂದ್ರಾಣಿ
ಅರುಂಧತಿ ವಿನುತೆ ವಂದನೆ
ಪರೇತರಾಡ್ಗರ್ವಂ ವಿಹೃತೆ ಪಾಲಗೋಪ್ರಾಣ ಸುಹೃತೆ
ಸುರಾಂಕವಕಾಶಾವಸನೆ ॥ ೧ ॥

ಜಲೇಶಯಾಸನ ಪೂಜಿತೆ ಜಾತ ಕಾಶ್ಮೀರ
ಲಲಾಮಲಲಾಟ ಭ್ರಾಜಿತೆ
ಕೀಲಾಲರುಹನಿಭನೇತ್ರೆ, ಕಲೋಮ ಕುಸುಮಗಾತ್ರೆ
ಲುಲಾಯದಾನವ ಮರ್ದನೆ ॥ ೨ ॥

ನವೀನ್ಯೆನೆಲೆ ಚೆನ್ನವೀರೇಶನಬ್ಜ ಚಕೋರೆ
ನವೀನ ವಂದ್ಯಾಬ್ಜಕಂಧರೆ
ಕವೀಂದ್ರ ಶಾಬಕ ನಮಿತೆ ಕಾಳಿ ಪ್ರತ್ಯೂಹ ಶಮಿತೆ
ಗವೀಂದ್ರ ವರದೆ ಗೋಪಾವನೆ ॥ ೩ ॥

೪೮

ಕಾಯೆ ಭವಾನಿ ಕಾತ್ಯಾಯನಿ ಎನ್ನ
ಕಾಯೆ ಕಾಯೆ ಭವಾನಿ ಕಾಮಿತ ಫಲದಾಯಿನಿ
ಕಾಯ ಜೀವ ಮರ್ದಿನಿ ಕಾರುಣ್ಯನಿಧಿ ಮೃಡಾನಿ ॥ ಧ್ರು ॥

ಚಂಡ ಮುಂಡಾರ್ದಿನಿ ಚಣ ಸಿಂಹವಾಹಿನಿ
ಭಂಡದಾನವಕೋಟಿ ಬಾಹು ವಿಚ್ಛೇದಿನಿ ॥ ೧ ॥

ವಿಧಿ ವಿಷ್ಣು ರೂಪಿಣೆ ವಿಜ್ಞಾತಭಯ ಪಾಣೆ
ವಿದಿತ ಸದ್ಗುಣಶ್ರೇಣ ವಿಂಧ್ಯಾದ್ರಿ ಗೃಹ ರುದ್ರಾಣಿ ॥ ೨ ॥

ಐನಿಲಯವಾಸಿನಿ ಅಘಕುಲವಿನಾಶಿನಿ
ಮೈನಾಕಗುಹ ಜನನಿ ಮೃಡ ಚೆನ್ನವೀರೋನ್ಮಾನಿ ॥ ೩ ॥

೪೯

ಏ ಭವಾನಿ ಭವಾನಿ
ಸಮವಸಾಕರೆ ಬ್ರತಿಯೆ ॥ ಪ ॥

ಜಾತರೂಪನಿಭ ದ್ಯೋತಪಘನ ಶೋಭಾ
ಶೀತಕರಾಸ್ಯ ಬಲಕುಲವರೆ ॥ ೧ ॥

ತಾವಕ ಶ್ರೀಪಾದ ಸೇವಕಜನ ಶ್ರೀದ
ಶಾವಕ ಪರಿಣೇಕ್ಷಣೆ ಗುಣಧುರ್ಯೆ ॥ ೨ ॥

ಶುಂಭವಿನಾಶಿನಿ ಶುಂಭದ್ವೈನಿಲಯೆ ನೀ
ಶಂಭು ಚೆನ್ನವೀರೇಶನ ಮನೋಹರೆ ॥ ೩ ॥

೫೦

ಏ ಭವಾನಿ ಮದಾಂಬೆ ಮೃಡಾನಿ
ಕಾಯೆ ಕಾಯೆ ॥ ಪ ॥

ತುಹಿನಗಜಾತೆ ತ್ರಿಜಗನ್ಮಾತೆ
ಮಹಿಷ ಪ್ರಮುಖದಾನವಗಣ ವಿಹೃತೆ ವಿಖ್ಯಾತೆ ॥ ೧ ॥

ಮೃಗಪವರೂಥೆ ಮುನಿಜನ ನಮಿತೆ
ನಗರಿಪುಸತಿ ಭಾರತಿ ಮಾವಿನುತೆ ಪುನೀತೆ ॥ ೨ ॥

ದುರಿತವಿಧೂತೆ ಧ್ರುವ ಪರಿಪೂತೆ
ಸ್ಫುರಿತೈನೆಲೆಗೃಹ ಚೆನ್ನವೀರೇಂದ್ರ ಸುಪ್ರೀತೆ ॥ ೩ ॥

೫೧

ಶ್ರೀಶೈಲೇನ ಸುತೆ ರುದ್ರಾಣಿಯೆ
ಶ್ರೀಶರ್ವಾಣಿ ಜಯಕಲ್ಯಾಣಿಯೆ ॥ ಪ ॥

ಕ್ಷೋಣಿಸ್ಯಂದನನ ನಿಜರಾಣಿಯೆ
ವಾಣಿ ಭಾರ್ಗವಿ ನುತೆ ವರಪಾಣಿಯೆ ॥ ೧ ॥

ನಕ್ತಂಚರ ನಿಕರ ವಿಹಾರಿಯೆ
ರಕ್ತಬೀಜಾಸುರ ಸಂಹಾರಿಯೆ ॥ ೨ ॥

ದುರ್ಗಾಸುರ ವಿಮರ್ದನ ಕಾಳಿಯೆ
ದುರ್ಗಾಸೇವಿತ ಮಾತೃಕಾಳಿಯೆ ॥ ೩ ॥

ಮೇನಕಾತ್ಮಜ ತ್ರಿಜಗನ್ಮಾತೆಯೆ
ಮೈನಾಕಾಗ್ರಭವೆ ಮನ್ಮಾತೆಯೆ ॥ ೪ ॥

ಭವ್ಯ ಚೆನ್ನವೀರಾರ್ಯನರ್ಧಾಂಗಿಯೆ
ನವ್ಯಐನಿಲಯೆ ಶ್ಯಾಮಲಾಂಗಿಯೆ ॥ ೫ ॥

೫೨

ಕಲ್ಯಾಣಿ ಕಾಯೆ ನೀ ರುದ್ರಾಣಿ
ಕಲ್ಯಾಣಿ ಸಲ್ಲಲಿತೆ ಸನ್ಮಹಿತೆ ದೇವಿ
ಧನ್ಯೆ ಮಾನ್ಯೆ ಮನ್ನಯನೆ ॥ ಧ್ರು ॥

ಹಿಮಗೋತ್ರತನಯೆ ಹಿತಜನವಿನಯೆ
ಅಮರೀಸುಕರೆ ಅಬಲಾಪ್ರಕರೆ
ಸುಮವಿಪಿನಕುರೆ ಶೋಭಾಮುಕುರೆ ॥ ೧ ॥

ಕಾತ್ಯಾಯನೀಶ್ವರಿ ಕಾರುಣ್ಯಾಕರಿ
ನಿತ್ಯಸ್ಫುರಿತೆ ನಿಖಿಲೋದ್ಧರಿತೆ
ಸತ್ ಸಚ್ಚರಿತೆ ಸೌಮ್ಯಾಂಕುರಿತೆ ॥ ೨ ॥

ಚಂಚದ್ಯೆನಿಲಯಾರ್ಯ ಚೆನ್ನವೀರಾರ್ಯ
ಸಂಚಿತ್ಕಾರ್ಯ ಸಂಪದುದ್ಧರ್ಯ
ಪ್ರಾಂಚಧ್ಯೆರ್ಯ ಪ್ರಣವಾಂಗಾರ್ಯ ॥ ೩ ॥

೫೩. ರಾಗ - ಪೂರ್ವಿ

ಶ್ರೀಮೇನಕೀಜೆ ಶ್ರೀಮೇನಕೀಜೆ
ಜಯ ಮೇನಕೀಜೆ ಸುಕವಿಜನ ಸುರಭೂಜೆ ॥ ಧ್ರು ॥

ಭಾಸುರಾನನೆ ಶುಂಭಾಸುರ ಮರ್ದನೆ
ವಾಸರ ವರ ರಂಜಿತ ತೇಜೆ ॥ ೧ ॥

ಪದ್ಮಾಲಯೆ ಶಚೀಪದಜ್ಮಸತಿ ನುತೆ
ಛದ್ಮದಾನವರಿಪು ಕುಲಜೆ ॥ ೨ ॥

ಚಾರ್ಯನೆಲೆ ಚೆನ್ನವೀರೇಶ್ವರಪ್ರಿಯೆ
ಸಾರಯೋಗಿಣಿಸತಿ ಸಮಾಜೆ ॥ ೩ ॥

೫೪

ಈಶ ಮಹೇಶ ಮತ್ಪಾ
ಣೇಶ ನಿಮ್ಮಯ ಜಡೆಯೊಳು ವಿ
ಕಾಸಮಾಗಿಹುದದು ಪೇಳು ಕಾಂತನೆ
ಆಶೆಗಳೊಳು ಚರಿಸುವ ಜನರ
ದೋಷಂಗಳ ನಾಶನ ಮಾಳ್ಪಾ
ಕಾಶದ ನದಿಜಲವು ಕಾಣೆ ಪಾರ್ವತಿ ॥ ಪ ॥

ವಿಲಸಿತ ಸರ್ವಜ್ಞ ನೀವೆ
ಜಲವೆಂದು ನುಡಿದೀ ಜಡೆಯೊಳು
ಚೆಲುವ ಮುಖವಿರುವುದು ಪೇಳು ಕಾಂತನೆ
ಲಲನೆಯರ ಕುಲಕೆಲ್ಲ ನೀ

ತಲೆರನ್ನವೆ ಕೇಳಾ ನೀರೊಳು
ಜಲರುಹಮುದ್ಭವಿಸಿತು ಕಾಣೆ ಪಾರ್ವತಿ ॥ ೧ ॥

ನೀಲಗಳನೆಯದು ಕಮಲವೆನೆ
ನೀಲಾಕಗಳನಿರ್ದಪುವು
ಪಾಲಿಸಿ ಪೇಳುವುದೆನ್ನೊಡನೆ ಕಾಂತನೆ
ಬಾಲಾಮಣಿ ಇನ್ನಾದರು ನೀ
ನಾಲಿಸು ಮೇಣಾ ಪದ್ಮಕ್ಕೆ ಭ್ರಮ
ರಾಲಿಗಳಿರ್ದಪುವು ಕಾಣೆ ಪಾರ್ವತಿ ॥ ೨ ॥

ಸಬ್ಬರೆಯನೆ ನೀ ಕೇಳು
ಹಬ್ಬುಗೆಯೆಂದುಸುರಿದಿ ಕದರೆರಡು
ಹುಬ್ಬುಗಳಿರ್ದಪುವು ಪೇಳು ಕಾಂತನೆ
ಮಬ್ಬಿಗರನು ಮರ್ದಿಸಿ ಮಿಂಚುವ
ಸಬ್ಬಾಣಿಯೆ ನೀ ಕೇಳಾ ನೀ
ರೊಬ್ಬುಳಿ ತೆರೆಯಾರ್ದವೆ ನೋಡೆ ಪಾರ್ವತಿ ॥ ೩ ॥

ಮಾನಿತಪರಮೇಶ್ವರ ನೀ ಕೇ
ಳೀನೀರೊಳು ನೋಡಲು ದಿವ್ಯ
ಮಾನಿನಿ ಕಣ್ಣುಗಳೆರಡಿಹವು ಕಾಂತನೆ
ನೀನೊಯ್ಯನೆ ನಿಂದೀಕ್ಷಿಸುವದು
ಪಾನೀಯ ದಿಶ ಪರಿಗಳೆಂಬ
ಮೀನುಗಳಾಡುವವೆ ಕೂಡಿ ಪಾರ್ವತಿ ॥ ೪ ॥

ಸುಂದರ ಸರ್ವೋತ್ತಮ ಪರಮಾ
ನಂದಕರ ಈ ಜಲದೊಳು ಸ್ತ್ರೀ
ಕಂಧರಮಿರ್ದಪುದು ಪೇಳು ಕಾಂತನೆ
ಮಂದಗಮನಿ ಬೆರಗಾಗದಿರು
ಮಂದಾಕಿನೀವನದೊಳು ಶಂಖ
ಬಂದುದು ತೇಲಿರ್ದುದೋಯೇನೊ ಪಾರ್ವತಿ ॥ ೫ ॥

ಮುಕ್ಕಣ್ಣನೆ ಮೂಜಗದರೆಯನೆ
ಸಕ್ಕರಿವಿಲ್ಲನ ಸುಟ್ಟಿಹನೆ
ಕಕ್ಕಸಮೊಲೆಯುದಕದೊಳಿಹವೆ ಕಾಂತನೆ

ಚಕ್ಕನೆಸರೊಳು ಚರಿಸುವ
ಜಕ್ಕವಕ್ಕಿರಡಿರ್ದಪವೇ
ನಕ್ಕಜಮಿದು ಪೇಳೆನ್ನೊಡನೆ ಪಾರ್ವತಿ ॥ ೬ ॥

ಮಾಂವಳಿರಾಕಾರವನಾಂತ
ಬಂಧುರ ಹಸ್ತಗಳೆರಡಿರ್ದಪ
ವಿಂದೆನೆಗಾಶ್ಚರ್ಯಮಾದುದು ಕಾಂತನೆ
ಸ್ಯಂದನದೊಳು ಸೊಕ್ಕಿ ಬೆಳೆದು ಬಾ
ಲಿಂದಿಂದಿರಕತಿ ಹಿತಮಾಗಿಹ
ಕೆಂದಾವರೆನಾಳಗಳೇಳೆ ಪಾರ್ವತಿ ॥ ೭ ॥

ಚಂಚಲಲೋಚನೆಯನು ತಂದು
ಅಂಚಿತ ಜಡೆಯೊಳು ಮಡಿಗಿಟ್ಟು
ವಂಚನೆಯನು ಮಾಡಿ ಪೇಳಿದಿ ಕಾಂತನೆ
ಅಂಚಿತದಶಲಕ್ಷಯೋಜನ
ಲಾಂಛನದಿ ಮಿನುಗುವ ಗಂಗೆಯ
ನಾಂಚಪಲದಿ ಧರಿಸಿಕೊಂಡೆನೇ ಪಾರ್ವತಿ ॥ ೮ ॥

ಸುರುಚಿರಮಣಿಮಕುಟವ ಬಿಟ್ಟಂ
ಬರದೊಳಗಿಹ ನೀರ್ವೆಣ್ಣಿನ ಪೊ
ತ್ತಿರುವುದು ನಿನಗೇನು ಸೌಖ್ಯವೆ ಕಾಂತನೆ
ವರದ್ಯನೆಲೆ ಚೆನ್ನವೀರಗುರು
ವರ ನಾನುರಿಗಣ್ಣಿನ ಸೆಕೆಗೆ
ಸುರನದಿ ಧರಿಸಿರ್ದೆನು ಕಾಣೆ ಪಾರ್ವತಿ ॥ ೯ ॥

೫೫

ಪಾಲಿಸಯ್ಯ ಪರಮಪುರುಷ ಬಸವರಾಜ
ಶ್ರೀವಿಶಾಲೈನಿಲಯ ಶರಣಸತ್ಯಬಸವರಾಜ ॥ ಧ್ರು ॥

ಆದಿವೃಷಭ ಅಪ್ರಮೇಯ ಬಸವರಾಜ
ಮುನಿ ಶಿಲಾದನ ನಂದನ ನಂದಿಬಸವರಾಜ

ವೇದವೇತ್ತ ವಿಶದಗಾತ್ರ ಬಸವರಾಜ
ನಿತ್ಯನಾದಿಯುಗದ ನಾದಮೂರ್ತಿ ಬಸವರಾಜ ॥ ೧ ॥

ಭವದಿಂದೆ ನಾ ಬಾಯಿಬಿಡುವೆ ಬಸವರಾಜ
ಸುತ್ತಿ ಕವಿವ ರುಜಕೆ ಕರಗುವೆನು ಬಸವರಾಜ
ಅವಕಾಶವಿದಕಿಲ್ಲವಿನ್ನು ಬಸವರಾಜ
ನಿಮ್ಮ ಕುವರನೆಂದು ಕುಶಲವಿರಿಸು ಬಸವರಾಜ ॥ ೨ ॥

ಹುರುಳಿಲ್ಲದ-ಘುಸಿಯ ತನುವು ಬಸವರಾಜ
ಇದಕೆ ಪರಿಣಾಮದ ಪಥವನ್ನುಂಟೆ ಬಸವರಾಜ
ಮರವೆ ಬಂದುನ್ನತ್ತನಾದೆ ಬಸವರಾಜ
ಅಂತಃಕರಣವಿಟ್ಟು ಕರುಣಿಸಯ್ಯ ಬಸವರಾಜ ॥ ೩ ॥

ಭೃತ್ಯ ನಾನು ಭೂಪ ನೀನು ಬಸವರಾಜ
ಸಲೆ ಅನಿತ್ಯ ನಾನು ನಿರಘ ನೀನು ಬಸವರಾಜ
ಮಿಥ್ಯನಾನು ಮೇರು ನೀನು ಬಸವರಾಜ
ನೋಡಪತ್ಯ ನಾನು ಪಿತನು ನೀನು ಬಸವರಾಜ ॥ ೪ ॥

ಆರೂಢ ಪ್ರಮಥಾಗ್ರಗಣ್ಯ ಬಸವರಾಜ
ಕ್ರೂರಾಕಾರ ಜೈನಗರ್ವನಾಶ ಬಸವರಾಜ
ಸಾರ್ರೈನಿಲಯ ಸುಜನಾಧಾರ ಬಸವರಾಜ
ಚೆನ್ನವೀರೇಶ್ವರನ ವಿಗ್ರಹಾತ್ಮ ಬಸವರಾಜ ॥ ೫ ॥

೫೬

ಬಸವರಾಜೇಂದ್ರ ಪಾಲಿಸಯ್ಯ
ಭಾಸುರೈನಿಲಯ
ಪ್ರಸವಾಯುಧ ಮದವಿಭಂಗ
ಪ್ರಣವಮೂಲವರ್ಣಾಂಗ ॥ ದ್ರು ॥

ಕಲ್ಯಾಣಪುರ ನಿವೇಶ
ಕಲುಷಮಯ ಕಷ್ಟ ವಿನಾಶ

ಕಲ್ಯಾಣಕರ ಮಹಿಮಾಸಾಂದ್ರ
ಕಾರುಣ್ಯನದೀಂದ್ರ ॥ ೧ ॥

ಅನಪತ್ಯನಾಗಿ ನಾನು ಅತಿ
ಮೊರೆಯನಿಡಲು ನೀನು
ತನಯನ ಕೊಟ್ಟುದ್ಧರಿಸಿ ಮೆರೆದಿ
ತಡೆಯದೆ ನಿರ್ಭರದಿ ॥ ೨ ॥

ತತಶ್ರೀದ್ಯೆನೆಲೆಯಪುರಿಯ
ತಟಿನೀನಿಕಾಯ ಸದಯ
ಗತಿ ಚೆನ್ನವೀರೇಶ್ವರ ಹೃದ್ಧಾಮ
ಗಣಸಾರ್ವಭೌಮ ॥ ೩ ॥

೫೭

ಹಾಲು ಮಾರುವ ವನಿತೆ ಕಾಲು ಜಾರಿತು
ಬಾಲೆ ಬಸವನೆನಲು ಹರವಿ ನಿಂತಿತು ॥ ಪ ॥

ಯೋಜನದಲಿ ಬೀಳ್ವ ಹರವಿ
ರಾಜಬಸವ ಪಿಡಿಯೆ ಜೈನ
ರಾಜಸಭೆಯರಾಜಿ ಕೌತುಕಾಯಿತು ॥ ೧ ॥

ಹಾಲುಹರವಿ ಗಗನದಲ್ಲಿ
ಬಾಲಸೂರ್ಯನಂತೆ ಹೊಳೆಯೆ
ಸಾಲುಗೊಂಡು ಜನದವಿತತಿ ನೋಡಿತು ॥ ೨ ॥

ಗೊಲ್ಲನಾರಿ ಬಿದ್ದ ಕುರುಹ
ನಲ್ಲಿತೋರಿಸಲ್ಕೆ ಸಭೆ
ಯೆಲ್ಲ ಮಹಾನಂದಕಡಲೊಳಾಳಿತು ॥ ೩ ॥

ಮೆರೆವ ಬಿಜ್ಜಳೇಂದ್ರನಾಳ್ವ
ಪುರದಮೇಲೆ ಪೂಮಳೆಯನು
ಸುರರು ಸುರಿಯೆ ಜಗತ್ತಿಗುತ್ಸವವಾಯಿತು ॥ ೪ ॥

ವರೈನೆಲೆಯಚೆನ್ನವೀರೇ
ಶ್ವರನ ಹೃದಯಕಮಲ ಬಸವ
ಚರಿತ ಸೂರ್ಯಪ್ರಭೆಗೆ ವಿಕಸನಾಯಿತು ॥ ೫ ॥

೫೮

ಬಸವ ಬಸವ ಗುರು
ಬಸವ ಬಸವ ಶಿವ
ಬಸವ ಬಸವ ಹರ
ಬಸವ ಬಸವ ಪಾಹಿ
ಬಸವದೇವ ಬಸವ
ಬಸವಯ್ಯ ವರದಬಸವ ॥ ಧ್ರು ॥

ಚಿತ್ತರದೊಳಗೆ ಚರ
ಮೂರ್ತಿರೆ ಬಿಜ್ಜಳನು
ಭಿತ್ತಿಯಗಳಿಸಲು ಕೈ
ಯೆತ್ತಿ ಪಿಡಿದು ಕರೆದ ಬಸವ ॥ ೧ ॥

ಸತಿಯಳುಟ್ಟ ಶಲ್ಯ
ಹಿತದಿ ಬೇಡಲಾಗ
ಶತಸಹಸ್ರಾಂಬರ
ತತಿಗಳು ಚರರಿಗಿತ್ತ ಬಸವ ॥ ೨ ॥

ಮಡಿದನೀವಿಪ್ರನು
ನುಡಿಸನೆ ನುಡಿಯನೆನಲು
ಮಡದಿ ಮೊರೆಗೇಳಿ ಪ್ರಾಣ
ಪಡದು ಪಾಲಿಸಿದ ಗುರುಬಸವ ॥ ೩ ॥

ನಿತ್ಯಮೂಗಳವಸ
ಮುತ್ತುಗಳನೀಯೆನಲು
ಮತ್ತೆ ಜೋಳಗಳನೆಲ್ಲ
ಮುತ್ತುಗಳ ಮಾಡಿ ಕೊಟ್ಟ ಬಸವ ॥ ೪ ॥

ವಿದಿತೈನಿಲಯಪುರ
ದಧಿಪ ಚೆನ್ನವೀರನ
ಹೃದಯ ಕಮಲವೆಂಬೊ
ಸದನದೊಳೆಸೆವ ಗುರು ಬಸವ ॥ ೫ ॥

೫೯

ಹೋಗಿ ಪೂಜಿಸುವೆನಿವಗೆ
ಹೊಳಿಯ ಬಸವನಿಗೆ
ಹೋಗಿ ಪೂಜಿಸಿ ಹೊಳಿಯ ಬಸವನಿಗೆ
ಬೇಗನೆ ವರಗಳ ಬೇಡುವೆನೀಗೆ ॥ ದ್ರು ॥

ಧರ್ಮರೂಪನಿಗೆ ದಾತಗೆ ದಶದಿಗ್ಭರಿತನಿಗೆ
ನಿರ್ಮಳಾಂಗನಿಗೆ ನಿತ್ಯಗೆ ನಿರ್ವಿಕಾರನಿಗೆ
ಕರ್ಮವಿಹರನಿಗೆ ಕರುಣಾಕರನಿಗೆ
ದುರ್ಮನದೂರಗೆ ದುರಿತಸಂಹರಗೆ ॥ ೧ ॥

ಪ್ರಮಥನಾಥನಿಗೆ ಪ್ರಳಯರಹಿತನಿಗೆ
ವಿಮತಮರ್ದನಗೆ ವಿಕಟನಿಗೆ ವಿಶ್ರುತಗುಣನಿಧಿಗೆ
ಶಮನ ವಿಧೂತಗೆ ಶರಣಪ್ರೀತಗೆ
ಸುಮನೋತ್ತಂಸಗೆ ಶುಭಹಂಸನಿಗೆ ॥ ೨ ॥

ರತಿಪತಿಯ ಮದವಿನಾಶಗೆ ರಮ್ಯವೇಷನಿಗೆ
ವಿತತೈನೆಲೆ ನದಿನಿವೇಶಗೆ ವಿಶ್ವಾಧೀಶನಿಗೆ
ಅತುಳ ಶ್ರೀಗುರು ಚೆನ್ನವೀರೇಶಗೆ
ಅತಿವಾಹನವಾದಾದಿ ವೃಷಭಗೆ ॥ ೩ ॥

೬೦

ಪಾಹಿಮಾಂ ಶರಣು ಬಸವ
ಪಾಹಿಮಾಂ ಶರಣು ಬಸವ
ಪಾಹಿಮಾಂ ಶರಣು ಬಸವ ॥ ಪ ॥

ಆದಿಯುಗದಿಂದಲತ್ತತ್ತ
ಆದಿಮೂಲಮೂರ್ತಿ ನೀನೆ
ಮೇದಿನಿ ಉದ್ಧರಿಸಿದಂಥ ಬಸವ ॥ ೧ ॥

ಶಿವನೆ ಬಸವ ಬಸವ ಶಿವನೆ
ಅಸಮ ಋಷಿಯು ವೃಷಭ ನೀನೆ
ವಸುಧೆ ಜನರ ಸಲಹಿದಂಥ ಬಸವ ॥ ೨ ॥

ಸಾಂಬಶಿವನ ಮತವ ಹಿಡಿದು
ಕುಂಭಿನಿಯೊಳು ಬಂದು ಮಾದ
ಲಾಂಬಿಕೆಯೊಳು ಜನಿಸಿದಂಥ ಬಸವ ॥ ೩ ॥

ಕಲ್ಯಾಣಕ್ಕೆಬಂದು ಬಿದ್ದ
ಕಲ್ಲಲಿಪಿಯನೋದಿ ತಕ್ಕೆ
ಯಲ್ಲಿ ದ್ರವ್ಯ ತೋರಿದಂಥ ಬಸವ ॥ ೪ ॥

ಶ್ರೀಪತಿಯವೋಲಗದಲ್ಲಿ
ಜೇಷ್ಠ ಅಕ್ಕನಾಗಮ್ಮಗಳ
ಹೊಟ್ಟೆ ಶಿಶುವ ನುಡಿಸಿದಂಥ ಬಸವ ॥ ೫ ॥

ಧರಣಿಪತಿಯ ಸಭೆಯಲ್ಲಿ
ಶರಣ ನಾಗಮಯ್ಯ ಬರಲು
ಬೆರಳಿನಲ್ಲಿ ಹಾಲುಗರೆದ ಬಸವ ॥ ೬ ॥

ಕೊರೆದ ಕಟ್ಟಿಗೆ ಬೊಂಬೆ ಮಾಡಿ
ಚರನು ಸತ್ತನೆನುತ ಬರಲು
ಭರದಿ ಅದಕೆ ಪ್ರಾಣವಿತ್ತ ಬಸವ ॥ ೭ ॥

ಖುಲ್ಲ ಜೈನರೆಲ್ಲ ಕೂಡಿ
ಹುಲ್ಲು ಜಂಗಮವನೆ ಮಾಡಿ
ನಿಲ್ಲದದಕೆ ಪ್ರಾಣವಿತ್ತ ಬಸವ ॥ ೮ ॥

ನಿಂಬೆಹಣ್ಣು ಕಟ್ಟಿಕೊಂಡು
ರಂಭೆ ಸಭೆಗೆ ಬರಲು ನೃಪಗೆ
ಬಿಂಬಲಿಂಗ ತೋರಿದಂಥ ಬಸವ ॥ ೯ ॥

ಸತ್ತ ಆಕಳವನು ಪಿಡಿದು
ಎತ್ತಿ ಹಾಲುಗರೆದು ತಂದು
ಪಿತೃ ಪ್ರಯೋಜನಕವಿತ್ತ ಬಸವ ॥ ೧೦ ॥

ಊರವೊಳಗೆ ಗೊಲ್ಲ ವನಿತೆ
ಮಾರುತಿರಲು ಹಾಲು ಮೊಸರು
ಜಾರಿ ಬಸವಯೆನಲು ಕಾಯ್ದು ಬಸವ ॥ ೧೧ ॥

ಮಾಣಿಕವನು ಸೋತು ಚರನು
ಮಾನಕೊಂಬುತಿರಲು ತೊಗರಿ
ಮಾಣಿಕವನು ಮಾಡಿಕೊಟ್ಟ ಬಸವ ॥ ೧೨ ॥

ಗಣಿತವಿಲ್ಲದಂಥ ಪ್ರಮಥಗಣಕೆ
ಶ್ರೇಷ್ಠ ಬಸವರಾಜ ಪ್ರಣಮರೂಪು
ಪಂಚಪರುಷ ಬಸವ ॥ ೧೩ ॥

ದರಣಿಯೊಳೈನಿಲಯ ವಾಸ
ಗುರು ಚೆನ್ನವೀರೇಶ
ಕರ್ಪೂರೇಶ ಇಷ್ಟಲಿಂಗ ಬಸವ ॥ ೧೪ ॥

೬೧

ನೋಡಿ ರಕ್ಷಿಸು ನೀ ಎನ್ನೊಡೆಯ ಬಸವೇಶ
ನಾಡೆ ಐನೆಲೆಪುರಿಯ ಮದೀಯ ಬಸವೇಶ ॥ ಪ ॥

ಕಲ್ಯಾಣಪುರಧೀಶ ಕಲುಷವಿನಾಶ
ಬಲ್ಲಿದ ಪ್ರಮಥೇಶ ಭವ್ಯ ಬಸವೇಶ ॥ ೧ ॥

ವಾದಿಜೈನರ ಗೆಲಿದ ವಸುಧೆಯೊಳು ನಲಿದ
ಸಾಧು ಕವಿಗಳ ಪೊರೆದ ಸಾರ ಬಸವೇಶ ॥ ೨ ॥

ನಮ್ಮನೆಯ ಹೆಮ್ಮಗ್ಗಳು ನದಿಯೊಳಿಡಲಂದು
ಉಮ್ಮಯದಿ ನೆಲಸಿದ್ದೈ ಉದ್ಧ ಬಸವೇಶ ॥ ೩ ॥

ನಿನ್ನನೆ ನೆನೆವಾನೀ ಕಷ್ಟದೊಳಿರಲು
ಅನ್ನಿಗರು ನಗರೇ ಕೇಳನಘ ಬಸವೇಶ ॥ ೪ ॥

ಅನಿಶಂ ನಿನ್ನನು ಬಿಡದೆ ಅತಿ ಭಜಿಸುವವನ
ಅನಪತ್ಯವ ಮಾಡೆನ್ನನಿಟ್ಟೆ ಬಸವೇಶ ॥ ೫ ॥

ತವಸೇವಕನ ವಂಶಂ ತವೆ ವರ್ಧಿಸಲಿಕೆ
ಭುವಿಯೊಳು ನಿನಗೆಯದ್ಭುತವೆ ಬಸವೇಶ ॥ ೬ ॥

ಮುನಿಮೃಕಂಡಾದಿಗಳು ಮುನ್ನೆಮೊರೆಯಿಟ್ಟು
ತನುಜರನು ಪಡೆಯರೆ ತವೆ ಬಸವೇಶ ॥ ೭ ॥

ಕುಲಮೆನ್ನದುದ್ಧರಿಸು ಕುವರನಿವನೆಂದು
ಬಲುನಂಬಿದೆನು ನಿನ್ನ ಭಳಿರೆ ಬಸವೇಶ ॥ ೮ ॥

ಚೆನ್ನವೀರೇಶ್ವರನ ಚಿತ್ತಾಬ್ಜಾಂತದೊಳು
ಸನ್ನಿಹಿತನಾಗಿರ್ಪ ಶರಣ ಬಸವೇಶ ॥ ೯ ॥

೭೨

ಪಾಹಿ ಶ್ರೀ ಸೋಮೇಶ
ಪ್ರಾಲೇಯಾದ್ರಿಜಾಧೀಶ
ಮೋಹಾಂಧಕಾರ ಭೇಶಾಮೋಘ ಸೌರಾಷ್ಟ್ರಪುರೀಶ ॥ ಧ್ರು ॥

ಚಂದ್ರೋತ್ತಂಸಾರುಣ ನೇತ್ರ
ಚಂದ್ರೋಜ್ವಾಲಾರುಣ ನೇತ್ರ
ಚಂದ್ರಾಚಲ ಚಂಚತ್ಕಲಂಬಾಸನ ಮಹೇಶ ॥ ೧ ॥

ವೇದಾಶ್ವಗೋತ್ರ ಶತಾಂಗ
ವೇದಾಂಗಾಸ್ಯ ಪೀತ ಚಿದಂಗ
ವೇದಾಂತ ಸಂವೇದ್ಯಸಾಧ್ಯಶ್ರೀ ಗಿರೀಶ ॥ ೨ ॥

ಭವ್ಯಕಾರ್ಯನಿಲಯೇಂದ್ರ
ಭವ್ಯಪ್ರದ ಸರ್ವಮುನೀಂದ್ರ
ಭವ್ಯಕರ ಸದ್ಭಾವ ಚೆನ್ನವೀರೇಶ ॥ ೩ ॥

೬೩

ಶ್ರೀಸೋಮೇಶ ಮಹೇಶ
ಭೇಶಭಾ ಸೌರಾಷ್ಟ್ರ ಪುರೀಶರೆ ॥ ದ್ರು॥

ಜೀಮೂತೇಂದ್ರನಂದನೆ ಸಾಥ
ಜೀಮೂತಗ್ರೀವ ಮನ್ನಾಥರೆ ॥ ೧ ॥

ಸಾಕಾಧಿಪ ವಿಧಿ ವಿಧು ನತಪಾದ
ನಾಕಾಮೃತ ಗೀರ್ವಾಣ ಶ್ರೀದರೆ ॥ ೨ ॥

ಶಂಬರಜಮಿತ್ರ ಸುತಾರಿ
ಶಂಬರಾರಿತನು ಸಂಹಾರಿರೆ ॥ ೩ ॥

ಕೀಶಧ್ವಜ ಶರದ ಜಿನವಾಸ
ಕೀಶಾಧಿಪ ಸಂಗೀತ ವಿಲಾಸರೆ ॥ ೪ ॥

ಪರಮಾನಂದೈನಿಲಯಂ ಪುರೇಂದ್ರ
ಪರಮಗುರು ಚೆನ್ನವೀರೇಂದ್ರರೆ ॥ ೫ ॥

೬೪

ಭೋಗಲಿಂಗಂ ಭಜೇ ಭೂಧ್ರಾಲಯಂ
ಭೋಗಿಂದ್ರಹಾರ ಕೇಯೂರವಲಯಂ ಭಜೇ ॥ ದ್ರು ॥

ಕುಧರಚಾಪಂ ಕುಶೇಶಯಾಕ್ಷರೂಪಂ ತರಣಿ
ವಿಧು ಚಕ್ರಮಂಬುಧಿ ನಿಷಂಗಂ ಶುಭಾಂಗಂ

ವಿಧಿಸೂತಮವನೀ ವರೂಥ ಮಹಿಪತಿಗುಣಂ
ತ್ರಿದಶಾರಿ ತ್ರಿಪುರ ಪ್ರಭೇದಮತುಲಂ ॥ ೧ ॥

ನೀರದ ತುಷಾರ ಕುಪಾರ ಘನಸಾರಾಮೃತ
ಶಾರದಗೌರ ಸುಶರೀರಂ ಸುಸಾರಂ
ಸಾರಸವಿಪಕ್ಷ ಶಿಖಿಸೂರ ನಯನಂ ಕೃಪಾ
ವಾರಾಕರಂ ವಿಬುಧವಾರಾರ್ಚಿತಂ ॥ ೨ ॥

ಶ್ಯಾಮಲಗ್ರೀವಂ ನಿರಾಮಯಂ ವ್ಯೋಮ ಗಂ
ಗಾಮಕುಟಮೈನಿಲಯ ಧಾಮಂ ವಿರಾಮಂ
ಜೀಮೂತಕುಲರಾಜ ಜಾಮಾತತಮ ಮಿತಗುಣ
ಧಾಮಂ ಶಿವಂ ಚೆನ್ನವೀರಣಾರ್ಯಂ ॥ ೩ ॥

೭೫

ಪಾಲಿಸೆನ್ನ ಸೋಮನಾಥ
ಪ್ರಾಲೇಯಾದ್ರಿಜಾ ಸಂಪ್ರೀತ ॥ ಪ್ರ ॥

ದಿವ್ಯ ಸೌರಾಷ್ಟ್ರಪುರೀಧಾಮ
ಭವ್ಯಜನಮಂದಾರ ಭೀಮ ॥ ೧ ॥

ಜನ್ಮದುಃಖ ಮರಣ ವಿರಹಿತ
ಮನ್ಮಂಭೋಜಾತ ಸವಿತೃ ॥ ೨ ॥

ಮರಣವಾದ ತಂದೆಯ ಕಂಡು
ಮರೆಹೊಕ್ಕೆನು ನಾ ಭಯಗೊಂಡು ॥ ೩ ॥

ಮಂತ್ರಿ ಬೋಧಿಸಿದ ಮಾತಿಗೆ
ಭ್ರಾಂತಿಸುತ ಬಂದೆ ನಿಮ್ಮೆಡೆಗೆ ॥ ೪ ॥

ಬಂದ ಸೇವಕನೋಹಿಲನೆಂದು
ಬಂಧನಂಗಳ ನೀ ಬಿಡಿಸಿಂದು ॥ ೫ ॥

ಮಾಯ ಸಂಸಾರವು ಹುಸಿಯೆಂದು
ಹೇಯ ಮಾಡಿದೆನು ದಯಾಸಿಂಧು ॥ ೬ ॥

ಪೂತ್ಯನಿಲಯ ಚೆನ್ನವೀರೇಶ
ಪ್ರೀತಿಯಲಿ ನೋಡೊ ಸೋಮೇಶ ॥ ೭ ॥

## ೭೭ ರಾಗ - ಭೈರವಿ

ಶ್ಯಾಮಗ್ರೀವ ಮಾಮಕ
ಭವಭಂಗ ಶ್ರೀಭೋಗಲಿಂಗ ॥ ದ್ರು ॥

ತಾರಕಾರಿಪಿತ ತಾರಕಾರಿಸುತನಾಶ
ಸುರಮಾರ್ಗಕೇಶ ಸಾರದ ತಾರ
ನೀರದ ಹರಿಣ ಶರೀರ ಕೃಪಾಕುಪಾರ
ವಾರಣ ದೈತ್ಯನಿವಾರಣ
ಕೃತ್ತಿಸುಚೇಲ ಭೋಗೀಂದ್ರ ಮಾಲ
ವೀರಾಕಾರ ಧರಣಿಶತಾಂಗ
ಸಾರಸತ್ಯ ಶಶಿ ತರಣಿ ರಥಾಂಗ
ಮೇರುಶರಾಸನ ಶರಧಿ ನಿಷಂಗ
ಮಾರಮಣೇಶ ಮಾರವಿನಾಶ ಸಾರಮಹೇಶ
ದೇವ ಸಜ್ಜನಸಂಜೀವ ದೇವ ಭೋಗಲಿಂಗ ॥ ೧ ॥

ಸೋಮಮಿತ್ರ ವಸುಸೋಮಮಿತ್ರ
ಗೋಶಾಂತ ಗೋತ್ರನಿಶಾಂತ
ರಾಮಗಾತ್ರರುಚಿ ರಾಮಶ್ರೋತ್ರ ಪರಗಾನ
ಮಾಧುರ್ಯಾಧೀನ ತಾಮರಸಜ ಸುತ್ರಾಮ
ಪ್ರಮುಖಸುರಜಾಲ ಪಾಲನಶೀಲ
ಚಾಮೀರಕಗರ್ಭಾನನ ಪಾತ್ರ
ಗೋಮೀನೀಶ ಮಾರ್ಗಣಪುರ ಜೈತ್ರ
ಮಾಮಕ ಜನ್ಮಲತಾವಹ ಧಾತ್ರ
ಘೀಮಸದೃಕ್ಷ ಹೋಮವಿಪಕ್ಷ ಕಾಮದಕ್ಷ
ದೇವ ಸಜ್ಜನಸಂಜೀವ ದೇವ ಭೋಗಲಿಂಗ ೨

ಶಾತಕುಂಭ ಸಂರೇತರೇತ
ವಿದ್ಯೋತ ದ್ವಿಪಾಸ್ಯತಾತ ಭೂತನಾಥ
ನಿರಾತಂಕನಘ ಚಿದಂಗ ನಿಗಮತುರಂಗ
ಶ್ವೇತವಾಹ ಗೋದಾತ
ಪರಾಕ್ರಮ ಪಾರಾವಾರ ಗಭೀರ
ವಾತಜಾತ ಸಂಗೀತ ವಿನೋದ
ಪೂತ್ಯನಿಲಯ ನಿಕೇತನ ಶ್ರೀದ
ವೀತಘ ಚೆನ್ನವೀರೇಂದ್ರಾಮೋದ
ಧೂತ ವಿದೋಷ ಖ್ಯಾತ ವಿಶೇಷ ಜಾತಸುವೇಷ
ದೇವ ಸಜ್ಜನಸಂಜೀವದೇವ ಭೋಗಲಿಂಗ ॥ ೩ ॥

೬೭

ವಂದೇ ಶ್ರೀ ವೀರೇಶ್ವರ ಪಾಲ ಬಾಣ
ವೃಂದ ಪುರಾಧೀಶ್ವರ
ವಂದನ ಪ್ರಮಥೇಂದ್ರ ಪರಮ
ಮಂದಸಿತವಪುರುಂದ್ರ ಬಹುಕರ
ದಂದಶೂಕ ಕುಲೇಂದ್ರಧರ ಮುನಿ
ವೃಂದ ನುತ ಸಾನಂದ ಸತತಂ ॥ ಪ ॥

ಶರ್ವಜ್ವಾಲಾಕ್ಷಜಾತ ಘನತರದಕ್ಷ
ಗರ್ವಾದ್ರಿ ವಜ್ರಖ್ಯಾತ
ಸರ್ವನತ ಮಖಪರ್ವ ಸಂಸ್ಥಿತ
ಗೀರ್ವರಚ್ಯುತ ಪರ್ವತಾಹಿತ
ಪೂರ್ವದೇವಾಖರ್ವ ಸುರಗಣ
ನಿರ್ವಪಕ್ಕತ ದೋರ್ವಲಸಮ
ಮಿತ್ರದಂತ ವಿಚ್ಛೇದನ ಭಗರವಿದಿವ್ಯ
ನೇತ್ರ ತಾರೋತ್ಪಾಟನ
ಚಿತ್ರ ವೇಷ ವಿಧಾತ್ರ ನೈಜಕ
ಛತ್ರನಾಶಿಕ ಧಾತ್ರ ವೀತಿ
ಹೋತ್ರ ರಸನಾಪತ್ರ ಕೃಂತನ
ಶತ್ರು ಕ್ರತುಪತಿ ವಕ್ತ್ರವಿಹರ ॥ ೧ ॥

ಫಾಲಾಕ್ಷ ರೌದ್ರಾಕರ ಐನಿಲಯ ಶ್ರೀ
ಲೋಲ ಚೆನ್ನವೀರೇಶ್ವರ
ಸ್ಥೂಲ ಮೂರ್ತಿ ಕರಾಲ ಮುಕ್ತವಿ
ಪಾಲ ಶರಕಾಕೋಲ ತೋಮರ
ವ್ಯಾಲ ಚಕ್ರ ತ್ರಿಶೂಲಧರ ಶ್ರೀ
ಕೋಲಕುಂದಿಪುರಾಲಯ ವರ

## ೬೮

ಶ್ರೀಶರ್ವಾತ್ಮಜ ಈಶ ಶ್ರೀವೀರಭದ್ರ
ಪೋಷಿಸೆನ್ನ ಸಂತತ
ಭಾಸುರ ಪ್ರಮಥಗಣೇಶ ಭವ್ಯ ಬಸ
ವೇಶನ ತೀರ್ಥ ಪ್ರದೇಶದೊಳೆಸೆವ ನಿ
ವೇಶ ಹುಮನಾಬಾದೀಶ ಶೌರ್ಯ ವೀ
ರೇಶ ದಯಾತಟನೀಶ ಮಹೇಶ ॥ ಪ ॥

ಶ್ರೀಶ ಬ್ರಹ್ಮ ಪುರಂದರಮರ ನುತಧೀರನೆ ರುದ್ರಾ
ಣೀಶನ ನಿಟಿಲ ದಮುನದೃಗುಸಂಭವ ಶೂರನೆ
ಕೀಶಕುಲೇಂದುಪದೇಶ ಕರ್ತೃಗುರುಸಾರನೆ ಕ್ರೂರಭಿ
ಲಾಶಯ ಕುಂಡಲ ಮಾಲಾ ಕಟಕ ಕೇಯೂರನೆ
ಭೇಶಾರುಣ ಶತಕೋಟಿ ತೇಜವಪ್ರ
ದೋಷಾಚಲ ಶತಕೋಟಿ ದೈತ್ಯತಮ
ಭೇಶ ಧೂರ್ತಕೀನಾಶ ತಟಿತಾ
ನಾಶುಗ ಹುತಭುಗ್ನೇತ್ರ ಸದಾಭಜೇ ॥ ೧ ॥

ಪತಿತ ದಕ್ಷಪುರಪತಿ ಮಖವತಿಸಂಹರನೆ ವಿಧಿಯಾ
ಚ್ಯುತ ಶತಕ್ರತುಮುಖಕರ ಕ್ರಂದನ ಗಂಭೀರನೆ
ಹುತವಹ ರಸನಾಪ್ಯತ ಘನರೌದ್ರಾಕಾರನೆ ಅನುಪಮ
ಯತಿಜನ ಕ್ರತುಭುಜ ಕ್ಷಿತಿರುಹ ಕೃಪಾಕುಪಾರನೆ
ವಿತತ ಪರಾಕ್ರಮ ರತಿಪತಿಗರ್ವವಿ
ಜಿತ ಜಿತರೇತಾದ್ಭುತ ವಿಗ್ರಹಗ್ರಹ
ಪತಿ ಸನ್ನುತ ಪದಾಮೃತಭವ ಭವಸಂ
ಹತಿಹತ ಘನ ಶಾಶ್ವತದೆ ಸದಾಭಜೇ ॥ ೨ ॥

ಪರಮತ ನಲಿನ ದ್ವಿರದ ಸಿತಾಂಗತಿಧುರ್ಯನೆ ಪ್ರಮಥವಿ
ಸರ ಪರಿಪಾಲನ ಶರಣ ಹೃದಾಂಬುಜ ಸೂರ್ಯನೆ
ಕರುಣಾಕರ ಭಯಕರ ಮಚ್ಛೇತನಿಕಾರ್ಯನೆ ಐನೆಲೆ
ಪುರವರ ಶ್ರೀಗುರು ಚೆನ್ನವೀರಣಾಚಾರ್ಯನೆ
ವರದ ಪರಮ ಸಚ್ಚರಿತಭರಿತ ಕವಿ
ವರ ಶರನಿಧಿ ಹಿಮಕರ ಬಹುಕರ ತವ
ಚರಣಾಂಬುಜ ಮಧುಕರನನೊಲವಿಂ
ಪರಿಪರಿಯಲಿ ಜೇಂಕರಿಸಿ ಸದಾಭಜೇ ॥ ೩ ॥

## ೬೯ ರಾಗ - ಭೈರವಿ

ಪಾಹಿ ಶ್ರೀಗುರು ವರವಣಿವೀರಭದ್ರ
ಕರುಣ ಸಮುದ್ರ
ದೇಹಿ ಪರಮಕೈವಲ್ಯ ಸೌಖ್ಯಪದಧಾಮ
ಮಮ ಹೃದ್ಧಾಮ ॥ ಪ ॥

ಮೃಡನ ಲಲಾಟನಲನೇತ್ರದಿ ಸಂಜಾತ
ನುತ ಗಣಜಾತ
ಕಡಲ ಗಗನ ಭೂಕುಲನಗ ನಡುಗಿಸಿದಾತ
ಬಹು ವಿಖ್ಯಾತ
ಕಡುರೌದ್ರಕರ ಬಹು ಭುಜಬಲ ಪ್ರತಾಪ
ಭೀಕರ ರೂಪ
ಗುಡುಗುಡಿಸುತ ದಿಕ್ತಟಗಳು ಭೇದಿಸಿದಾತ
ಸತ್ಫಲದಾತ ॥ ೧ ॥

ಅಸಿಧೇನುಕೆ ಖಟ್ವಾಂಗ ಶರಾಸನ ಬಾಣ
ಪರಿಘ ಕೃಪಾಣ
ಮುಸಲ ದ್ರುಘಣ ಸುಫಲಕ ತೂಣೀರ ಚಕ್ರ
ತೋಮರ ಚಕ್ರ
ಅಸಮಕುಠಾರ ಪ್ರಮುಖಾಯುಧ ಧೃತಹಸ್ತ
ಸತ್ವ ಪ್ರಶಸ್ತ
ಅಸುರಗೋತ್ರ ಮದವಾರಣವೃಂದ ಮೃಗೇಂದ್ರ
ಸದ್ಗುಣ ಸಾಂದ್ರ ॥ ೨ ॥

ಕ್ರತುಪತಿ ದಕ್ಷನ ಶಿರವ ಖಂಡಿಸಿದ ಧೀರ
ಶರಧಿ ಗಭೀರ
ಶತಧರ್ಮನ ಕರಕಂಜ ಬಾಂಧವನ ರದನ
ಕೇಶವ ವದನ
ಹುತವಹಜಿಪ್ವಾ ಭಾರತಿ ನಾಸಿಕನಾಶ
ಪಿಂಗಲಕೇಶ
ಕ್ರತುಭುಜ ಶಿವದೂಷಕ ಮುನಿಸಂಚಯ ಮಂಡ
ವನ ವೇದಂಡ ॥ ೩ ॥

ಶ್ಯಾಮಲಾಂಗ ಮಹಿಮಾರ್ಣವ ವಿಕ್ರಮವ್ಯಾಪ್ತ
ಕ್ರೋಧದುದಗ್ರ
ಚಾಮಿೂಕರನಗ ಚಾಪಮುದಾಂಬುಧಿ ರಾಜ
ಭಾಶ್ವಿತ ತೇಜ
ತಾಮರಸೋದ್ಭವ ಮುಖ್ಯಾಮರ ಪರಿಪಾಲ
ಫಣಿಪತಿಮಾಲ
ಮಾಮಕ ಹೃದಯಕುಶೇಶಯ ವಿಕಸಿತ ಸೂರ್ಯ
ಮಂಗಲಧುರ್ಯ ॥ ೪ ॥

ಪರಸಮಯಾಬ್ಧಿ ಘಟೋದ್ಭವ ಮದನ ವಿಪಕ್ಷ
ಮರುದೇಷ್ವಾಕ್ಷ
ಪರತರ ವ್ಯಾಳಾಸುರಮುಖ ದೈತ್ಯ ವಿಭಂಗ
ಪ್ರಮಥರ ಸಂಗ
ನಿರುತೈನಿಲಯಪುರೇಶ ಚೆನ್ನವೀರೇಶ
ಭಕ್ತ ನಿವೇಶ
ವರಕವೀಂದ್ರ ಮಾನಸಪದ್ಮಾಕರ ಹಂಸ
ವಿನಮಿತ ಹಂಸ ॥ ೫ ॥

೭೦

ಶ್ರೀಮಹೇಶ್ವರ ಧೀಮಂತ ರಾಚೋಟಿ
ಸ್ವಾಮಿ ಪಾಲಿಸು ಸಂತತ
ಕಾಮಹರ ಭಕ್ತಾಳಿಸಾಗರ

ಸೋಮ ಶಾಶ್ವತಸಾರ ಭವವನ
ಧೂಮಕೇತನ ಪರತರ ಕೊಟ್ರಕಿ
ಧಾಮ ಮಹಿಮೋನ್ನತ ಕರುಣಾಕರ ॥ ಪ ॥

ನಿತ್ಯನಿರ್ಮಲ ಶರಣಜನಾರ್ಚಿತಪಾದನೆ ಪರಮಾ
ದಿತ್ಯನ ಪುತ್ರನದ ಸಂಹೃತಾಮೋದನೆ
ಸತ್ಯ ಸುಜನಮಂದಾರಧೀರ ಘನಶ್ರೀದನೆ ಶ್ರೀಪಾ
ಪತ್ಯನ ಕೃತ್ಯ ವಿನಾಶನೆ ಖೇದ ವಿಚ್ಛೇದನೆ
ಅತ್ಯಧಿಕಮಯ ಭೂತಪ್ರೇತ ಭಯ
ಭಿತ್ಯ ದುರಾತ್ಮಕ ದುಷ್ಟ ವಿದೂಷಕ
ಮಿಥ್ಯ ವ್ರತಾವೃತಜನರ ವಿಭಂಜನ
ಭೃತ್ಯಜನ ಕಾಮಿತ ಫಲದಾಯಕ ॥ ೧ ॥

ಪರಮತಮೇಘ ಪ್ರಭಂಜನ ಭಜಕದಾರನೆ ಮೀರಿದ
ಪರಮತಪರ್ವತ ವಜ್ರ ಸದ್ಗುಣಾಕಾರನೆ
ಹರಮತಯುತ ಜನಹೃದಯಕುಶೇಶಯ ಸೂರ್ಯನೆ ನಿರುತಂ
ಹರಮತ ಪೂರ್ಣಸ್ಥಾಪನ ಗುರುಘನಸಾರನೆ
ವರದ ಭಯಕರ ಸುನೃತ ಭಾಸುರ
ಚರಕುಲಪುಂಗವ ಪಾವನರೂಪಕ
ಕರಣವಿಜಿತ ಜಿತಬಂಧನ ಭಾವಿಕ
ನಿರುಪಮಗುಣಗಣ ಭರಿತ ಕೃಪಾಕರ ॥ ೨ ॥

ಅತುಳ ಚಿದಂಗಪ್ರತಿಮ ಶಿವಾರ್ಚನಧುರ್ಯನೆ ಪರತರ
ವಿತತ ಸದಾಶಿವಧ್ಯಾನಪ್ರಲೀನ ಸುಕಾರ್ಯನೆ
ಕ್ಷಿತಿಜನನುತ ಪ್ರತಾಪ ಮಹತ್ವದ ಶೌರ್ಯನೆ ಶ್ರೀಗುರು
ಪ್ರತಿತೈನಿಲಯ ಚೆನ್ನವೀರಣಾಚಾರ್ಯನೆ
ಕೃತಕದಿ ಕಾಡುವ ಅತಿ ವೃಜಿನದ ಪಥ
ಗತಿಗೇಡಿ ಸುತ ಸನ್ಮತದಿಂ ಮನ್ನಿಸಿ
ಸತತಂ ನಿಮ್ಮಯ ಸುತನೆಂದೆನ್ನೊಳು
ಹಿತಕರವಿಡು ವಿಶ್ರುತ ಮೋಕ್ಷಕರ ॥ ೩ ॥

## ೭೧

ಎನ್ನ ಕರದೊಳಿರ್ದಮೇಲೆ ಏಕೆ ನುಡಿಯರಿ ಲಿಂಗವೆ
ಇನ್ನು ನಾನೇನೆಂದೆನೈ ಮದೀಶ ಇಷ್ಟಲಿಂಗವೆ ॥ ಧ್ರು ॥

ಶ್ರೀಗಿರಿಯೊಳಿರುವ ಚಂಚಸ್ತ್ರೀಯರೊಡನೆ ಚರಿಸುತೆ
ರಾಗದಿಂ ಕೂಡಿರ್ದಿರೆಂದು ರುಜುಗೆಟ್ಟು ನುಡಿದೆನೆ
ಬೇಗದಿಂ ಗಣವರನು ತನ್ನ ಭಾರ್ಯೆಯನು ಮಾರಲು
ಹೋಗಿ ತಂದಿರೆಂದು ಜನಕೆ ಹೇಳಿದೆನೇ ಲಿಂಗವೆ ॥ ೧ ॥

ಸಿದ್ಧರಾಮೇಶ್ವರನು ನಿಮ್ಮ ಶಿರಕೆ ಎಣ್ಣೆಯೂಡಲು
ಎದ್ದೆದ್ದು ನೆರಳಿದಿರೆಂದು ಎಲ್ಲರೊಡನೆ ಪೇಳ್ದೆನೆ
ನಿದ್ದೆಯೊಳಿರ್ದವಳ ಲಿಂಗ ಕದ್ದು ಕೈಲಾಸಾದ್ರಿಗೆ
ಸದ್ದು ಮಾಡದೆ ಬಂದಿರೆಂದು ಸಾರಿದೆನೆ ಲಿಂಗವೆ ॥ ೨ ॥

ಮೊರನವೇಮಯ್ಯನ ಬಿದಿರಹೊರೆಯ ಹೊತ್ತಿರೆಂದೆನೆ
ಮೆರೆಮಿಂಡನಿಗಂಜಿ ವನದ ಮರೆಯೊಳಿರ್ದಿರೆಂದೆನೆ
ಇರುಳೆ ಕುಲಶ್ಚರಿಯರ ಮುಂದೆ ಇರ್ದಿರುತಲಾತನ ಕೈಯೊಳು
ದೊರಗು ಬಡಿಸಿಕೊಂಡಿರೆಂದು ದೂರಿದೆನೆ ಲಿಂಗವೆ ॥ ೩ ॥

ಬತ್ತಲಾಗಿರ್ದವಳಿಗೊಲಿದು ಬಾಲನಾದಿರೆಂದೆನೆ
ಕತ್ತಲೊಳು ಕಳುಹಿ ಬಿತ್ತಿದ ಕವಳೆ ತರಿಸಿದಿರೆಂದೆನೆ
ಸತ್ತ ಮಗನಿಗಳಲದಿರ್ದ ಸತಿಯ ಕೈಯ ಒನಕೆಗೆ
ತತ್ತರಿಸಿದಿರೆಂದು ಜಗಕೆ ತಿಳಿಸಿದೆನೆ ಲಿಂಗವೆ ॥ ೪ ॥

ಭಾಸುರಾಂಬುಧಿಯೊಳು ಬೆರೆದ ಬೀದಿ ನೀರಪವಿತ್ರವೆ
ಕಾಶಿ ಸುವರ್ಣಿಯೊಳು ಬೆರೆದ ಕಾಷ್ಠ ಜಾಡ್ಯರೂಪವೆ
ದೋಷವಿರಹಿತ್ಯನೆಲೆಯಧಾಮ ಚೆನ್ನವೀರ ನಿಮ್ಮ
ದಾಸನಾದ ಮೇಲೆ ಮತ್ತೆ ಧನ್ಯನಲ್ಲವೆ ಲಿಂಗವೆ ॥ ೫ ॥

## ೭೨

ಲಿಂಗಮಹೇಶ್ವರ ಲಿಂಗಮದೀಶ್ವರ
ಲಿಂಗ ಸಮವಾಯಿ ಲಿಂಗ ಲಿಂಗಯ್ಯ ॥ ಪ ॥

ಭಂಗವಿರಹಿತ ಲಿಂಗನಸುವಿನೊಳು
ಸಂಗಮಾಗಿಹ ಪ್ರಾಣಲಿಂಗ ಲಿಂಗಯ್ಯ ॥ ೧ ॥

ನುಲಿಯಚಂದಯ್ಯನ ತೊಲಗಿ ನೀರೊಳುಬಿದ್ದು
ನುಲಿಯ ಮಾರಬಂದ ಚೆಲುವ ಲಿಂಗಯ್ಯ ॥ ೨ ॥

ಹುಟ್ಟಿದ ಶಿಶು ಕೊಲ್ಲ ದಿಟ್ಟುಗ್ರದಂಡಿಯ
ನಿಷ್ಠಗೆ ಮಾತಾಡಿದಿಷ್ಟ ಲಿಂಗಯ್ಯ ॥ ೩ ॥

ಅಂಗನೆ ತಾನುಂಡು ಪೊಂಗಿ(?)ಳಿಟ್ಟ ತಳಿಗೆ
ನುಂಗಿವ ವರ ಭೀಮಲಿಂಗ ಲಿಂಗಯ್ಯ ॥ ೪ ॥

ಕಮಳಾಯಿಯಸು ಸಹಗಮಿಸಲ್ಕೆ ಮುಕ್ತಿಯುಕ್ತಿ
ಸಮರಸವಾಗಿಟ್ಟ ವಿಮಲಲಿಂಗಯ್ಯ ॥ ೫ ॥

ಚಿತಭಸ್ಮವಿಲ್ಲೆಂದು ಸತಿಯದಹಿಸಿ ಧರಿಸ
ಲತಿಶಯ ಪದವನಿತ್ತತುಳ ಲಿಂಗಯ್ಯ ॥ ೬ ॥

ಅಂಗವಿಸಿ ಶತಚುಂಬನಂಗಳಿತ್ತವಳಿಗೆ
ಮಂಗಳವರವಿತ್ತ ತುಂಗ ಲಿಂಗಯ್ಯ ॥ ೭ ॥

ಹೊಳೆ ಬರಲು ನಡುವೆ ಕುಳಿತು ಪೂಜಿಸುವಾತ
ನೊಳು ಮಾತನಾಡಿದ ಸುಲಭ ಲಿಂಗಯ್ಯ ॥ ೮ ॥

ಪ್ರತಿಗೆ ಲಿಂಗವನಾಗಿ ಸತಿಗೆ ಪುರುಷನಾಗಿ
ಹಿತದಿಂದೆ ಕೂಡಿದ ಪೃಥುಲ ಲಿಂಗಯ್ಯ ॥ ೯ ॥

ನಾಗಕನ್ನೆರು ಮಾಳ್ಪ ರಾಗಕೊಲಿದು ತಲೆಯ
ದೂಗಿ ಬಾಗಿನಿಂದ ಭೋಗಲಿಂಗಯ್ಯ ॥ ೧೦ ॥

ವಿತತೈನೆಲೆಯ ಪುರಪತಿ ಚೆನ್ನವೀರೇಂದ್ರ
ಸತಿಯ ಒಲಿಸುವಪ್ರತಿಮ ಲಿಂಗಯ್ಯ ॥ ೧೧ ॥

೭೩

ಎಂದಿಗೆ ದೊರಕುವುದೊ ಶಿವಸುಖ
ಸುಂದರ ಪೂರ್ಣಾನಂದದ ॥ ಪ ॥

ಉದ್ಯತ ಭ್ರುಕುಟಿಯ ಮಧ್ಯದಿ ಬೆಳಗುವ
ಹೃದ್ಯಸುಲಿಂಗದ ವಾದ್ಯ ವೈಭವ ॥ ೧ ॥

ರೇಚಕ ಪೂರಕ ಪ್ರೋಷಿತ ಕುಂಭಕ
ಖೇಚರಾದಿ ಮುದ್ರಾಚರದನುಭವ ॥ ೨ ॥

ಸನ್ನುತ್ಯನೆಲೆಯ ಚೆನ್ನವೀರಾರ್ಯರ
ಸನ್ನಿಧಿಲಿಪ ಪರಮೋನ್ನತ ಮೋಕ್ಷವ ॥ ೩ ॥

೭೪

ಏನುಸುಖ ಕಂಡಿ ಮನವೇ ದುರ್ಗುಣದಿ
ಹಾನಿಯಾದಿ ಅಕಟ ಜಗಕೆ ಬಂದು ॥ ಪ ॥

ನಿತ್ಯಮಾಗಿಹ ವಸ್ತುವ ಸಾಧಿಸದೆ
ಮಿಥ್ಯಭೋಗಗಳಿಗೆಳಸಿ ಬಳಸಿ
ಸತ್ಯಮಾರ್ಗವ ಹಿಡಿಯದೆ ದೋಷ ದುಷ್
ಕೃತ್ಯದೊಳು ಸಿಲ್ಕುತಳಲಿ ಬಳಲಿ ॥ ೧ ॥

ನಾರಿಯರ ವಾರೆನೋಟವೆಂದೆಂಬ
ಕೂರಂಬಿಗಾತುನಿಂದು ನೊಂದು
ಘೋರ ಭವಸಾಗರದೊಳು ಮುಳುಮುಳುಗಿ
ಪಾರಾಗದಂತೆ ಮರುಗಿ ಸೊರಗಿ ॥ ೨ ॥

ತನ್ನ ನಾಭಿಯ ಪರಿಮಳ ತಾ ತಿಳಿಯದೆ
ಮುನ್ನಳಿದ ಮೃಗದ ತೆರದಿ ಮರದಿ
ಸನ್ನುತ್ಯನೆಲೆಯನಿಲಯಧ ಪರಮಗುರು
ಚೆನ್ನವೀರಾರ್ಯನರಿಯದೆ ಬರಿದೆ ॥ ೩ ॥

೭೫

ನಿನಗಿದು ಗುಣವೆ
ನೀ ತಿಳಿ ಮನವೆ ॥ ಧ್ರು ॥

ಕುಪಥವ ಮೆಟ್ಟಿ ಕೊರಗಿದಿ ಘಟ್ಟಿ
ಸುಪಥವ ಬಿಟ್ಟಿ ಸುರತದಿ ಕೆಟ್ಟಿ ॥ ೧ ॥

ತಾಪದೊಳುರಿದಿ ತತ್ವವ ತೊರದಿ
ಪಾಪದಿ ಬೆರೆದಿ ಪರಮನ ಮರದಿ ॥ ೨ ॥

ಚೆನ್ನವೀರಾರ್ಯ ಬೆರೆದೈನಿಲಯ
ನಿನ್ನೊಳಗರಿಯ ನಿಖಿಲವ ಜರಿಯ ॥ ೩ ॥

೭೬

ಸ್ಥಿರವಾಗಿರುವುದಿನ್ನು ಎಂದಿಗೂ ದು
ಶ್ಚರಿತದಿ ಚರಿಸುವ ದುರುಳಮನವೆ ॥ ಧ್ರು ॥

ಕುಲವಂತನೆಂದು ಮಾರ್ಮಲೆವುತೆ ಬಹು ನಿ
ರ್ಮಲ ಶೀಲವಂತನೆಂದುಸುರಿಕೊಂಬುವೆ
ನೆಲೆಗೆಟ್ಟು ತಿರುಗಿ ಅಕುಲಜರೈಶ್ವರ್ಯಕ್ಕೆ
ತಲೆದೂಗಿ ಬಯಸುವ ಹೊಲಸು ಮನವೆ ॥ ೧ ॥

ಹಿಂಡುಮಂದಿಯೊಳಿರ್ದ ಮಿಂಡಿವೆಣ್ಣುಗಳನು
ಕಂಡಾಕ್ಷಣಕೆ ತಾಯಿ ತಂಗಿಯೆಂಬುವ
ತಂಡವಬಿಟ್ಟು ಮುಂಕಂಡಿರ್ಪ ತರುಣಿಯ
ದುಂಡುಮೊಲೆಗೆಳಸುವ ಚಂಡಿ ಮನವೆ ॥ ೨ ॥

ಮಡದಿ ಮಕ್ಕಳು ಮನೆ ಒಡವೆ ವಸ್ತ್ರಗಳು ಬಂದ
ಒಡೆಯ ಜಂಗಮದ ಸೊಮ್ಮುಗಳೆಂಬೆ
ಒಡಲುಹಸಿದು ಬೆಂಬಿಡದೆ ಬಂದಯ್ಯಗೆ
ಬಿಡುನುಡಿಯಾಡುವ ತುಡುಗು ಮನವೆ ॥ ೩ ॥

ಕಳವು ಹಾದರ ಮುಳಿಸು ಪಳಿಯುಮ್ಮಳಿಕೆಯು ಹಿಂಸೆ
ಗಳ ಮಾಡಬಾರದೆಂದೆಂಬೆ ಪರರಿಗೆ
ಮುಳುಮುಳುಗಿಸುವ ಗುಣಗಳ ತಾಳ್ದು ಭವದೊಳು
ಮುಳು ಮುಳುಗೇಳುವ ಕೊಳಕು ಮನವೆ ॥ ೪ ॥

ನಡೆನುಡಿವೊಂದಾಗಿನಡೆದಾದರೊ ಗಳನೆ
ಬಿಡದೆ ಜಾನಿಸಿಕೊಂಡಿರುತೆ ಬಳಿಕ
ದೃಢತರೈನೆಲೆಪುರದೊಡೆಯ ಚೆನ್ನವೀರೇಶ
ನಡಿಗಳ ಸೇವೆಯಪಡಿಯೊ ಮನವೆ ॥ ೫ ॥

೭೭

ಏಕೆ ತಿಳಿಯದೆ ಬರಿದೆ ಭ್ರಮೆಗೊಳುವಿ ಮನವೇ
ಕಾಕುವಿಷಯಕ್ಕೆಳಸಿ ಕೆಡುವುದಿದು ಗುಣವೇ ॥ ಪ ॥

ಈಡಾಪಿಂಗಳವೆಂಬ ನಾಡಿಗಳ ತುದಿಮೆಟ್ಟಿ
ಗೂಡಿನೊಳಪೊಕ್ಕು ಗುಡ್ಡಗಳ ನೆರೆ ನಿಲಿಸಿ
ರೂಢಿಸಿದ ಚಿದ್ ವ್ಯೋಮದೊಳು ಪೊಳೆವ ಚಿನ್ಮಯನ
ನೋಡಿ ಭವಮಾಲೆಗಳನುಳಿದು ರಾಜಿಸದೆ ॥ ೧ ॥

ಕರಣಗುಣಗಳನುಡುಗಿ ವರ್ಣಪಂಚಕಮಡಗಿ
ಸ್ಮರಣದಿಂ ಯೋಗಪ್ರವೀಣ ಮಾನಸರ
ಕರುಣದಿಂ ಚಿದಾಭರಣಾಂಗನಾಗಿ
ವರ್ಧಿಸುತ ವರ್ತಿಸದೆ ॥ ೨ ॥

ಇಳೆಯ ಭೋಗಗಳನತಿಗಳೆದು ಐನೆಲೆಯಪುರ
ನಿಳಯ ಚೆನ್ನವೀರೇಂದ್ರನೊಳು ಬೆರೆದು ನಿತ್ಯ
ದಳಕುಳದಿ ಥಳಥಳಿಸಿ ಬೆಳಗುತಿಹ ಚಿಜ್ಯೋತಿ
ಒಳಪೊಕ್ಕು ಬಯಲಿನೊಳು ಸುಲಭನಾಗಿರದೆ ॥ ೩ ॥

೭೮

ಗುರುವೆ ನೋಡು ನಿತ್ಯ ಘೋರ
ತರ ಭವಾಬ್ಧಿಯೊಳು ತಲ್ಲಣಿಸುವನ ॥ ಪ ॥

ಅಷ್ಟಮದಂಗಳೆಂಬ ಆನೆಗ
ಳಟ್ಟಿಬರುವವೀಗ ಬೇಗ
ನಷ್ಟಗುಣಗಳೆಂಬ ನೆಗಳುಗ
ಳಟ್ಟುಳಿಯಿಂದೆ ಕಂದಿ ಕುಂದಿ
ದುಷ್ಟ ವ್ಯಸನಕಿಟ್ಟಿ ಪುಷ್ಟಿ ಷಡರಿ ಶುನಿ
ಚೇಷ್ಟ ಬುದ್ಧಿಯರ್ಕ ರುಜ ಕರ್ಕಟ
ಭ್ರಷ್ಟ ಕೋಪ ಪೃಥು ಪುಷ್ಟಮಡರಿ ಸಂ
ದಷ್ಟಮಾಗಲತಿ ಕಷ್ಟಬಡುವನ ॥ ೧ ॥

ತೆರಹಿಲ್ಲದ ಜನ್ಮ ತೆರೆಯೊಳು
ತಿರುಗಿ ಬಾಡಿ ಬಳಲಿ ಅಳಲಿ
ದುರಹಂಕಾರ ಗತಿ ದುರ್ಗತಿ
ಶರಧಿ ಕಿಚ್ಚಿನಿಂದೆ ಬೆಂದೆ
ಪರಮದುಃಖ ಭಯ ಪರಿಮೋಹಾತುರ
ಪರಿಷದಂತದೊಳು ಪೊರಳಿ ನರಳಿ ಬಾ
ಯ್ದೆರೆದು ಪರವಸದೊಳೊರಗಿ ಮರೆದವನ
ಕರವ ಪಿಡಿದೆಳೆದು ಪೊರೆಯೊಳಿರಿಸಿ ॥ ೨ ॥

ಕ್ರೂರಕರ್ಮವೆಂಬ ಕುಟಿಲಾ
ಕಾರ ಮೊರಡಿಗಳುಕಿ ಬಳುಕಿ
ಪಾರುವಾಸೆಯೆಂಬ ಪಾವಸೆ
ಏರಲುಮ್ಮಳಿಸುವೆ ಬೀಸುವೆ
ಧೀರ ಸಾರ ಗಂಭೀರ ಕವಿ ಜನೋ
ದ್ಧಾರ ಶೂರ ಗುಣಸಾರ್ಯನಿಲಯಾ
ಗಾರ ಚೆನ್ನವೀರಾರ್ಯ ಸುಕರುಣಾ
ವಾರಿಧಿ ತೀರದಿ ಸೇರಿಸಿಪಾಲಿಸಿ ॥ ೩ ॥

೭೯

ಬಲ್ಲವರಾರಿನ್ನು ನಿಮ್ಮನು
ಬಹುರೂಪಿನಭವ
ಬಲ್ಲಿದ ಶರಣರಂತೆ
ಭಜಿಸಿ ಮಿಗೆ ಒಲಿಸಲಿಕ್ಕೆ ॥ ಪ್ರ ॥

ಒತ್ತರಿಸಿದ ವನದ ನಡುವೆ
ಸತ್ತಕರು ಸಹಿತ ನೀನಿರೆ
ಹೊತ್ತುಕೊಂಡರಮನೆಗೆ ನಡೆತಂದು
ಬಾಯಿಜೊಲ್ಲು ಮೆಯ್ಯ
ನೆತ್ತರವ ಸುರಿಯಲ್ಕೆ ಕಂಡಂದು
ನೆರೆದಿರ್ದ ಚರರ
ಮೊತ್ತಮದರುತಿರಲು ತಾ ನಿಂದು
ಚಿತ್ತವಿಟ್ಟರ್ಚಿಸಿರುವ
ವಿತ್ತ ಬಸವೇಶನಂತೆ ॥ ೧ ॥

ತನುಭವನ ಕೊಂದು ಬಿಸಾಡಿ
ಮನೆಯೊಳಡಿಗೆಯನೆ ಮಾಡಿ
ವಿನಯದಿಂದೆಡೆ ಬಡಿಸಲು ಉಣ್ಣದಿರೆ
ಕೋಪಿಸುತೆ ಕೈಯಿಂ
ಒನಕೆಯಂ ಪಿಡಿದೆತ್ತಿ ಮಸಗುತಿರೆ
ಹೆದರುತ್ತೆ ಪಂಚಾ
ನನಗಳನು ನೀನು ತೋರುತಿರೆ
ತನಲಿಂಗದಿ ಬಯಲಾದ
ವನಿತೆ ನಿಂಬೆವ್ವನಂತೆ ॥ ೨ ॥

ಶಶಿಮೌಳಿ ನೀವೆ ವಿಭ್ರಾ
ಜಿಸುವ ಭೂರುದ್ರನಾಗಿ
ವಸುಮತಿಯೆಂಬಾಖ್ಯ ಪಟ್ಟಣಕೆ
ನಡೆತಂದು ಜನರ
ವಿಸರಗಳು ಬೆರಗಾಗಿ ನೋಡಲಿಕೆ
ಮಹಾಕಾರವಾಂತು
ಮಿಸುಗುವಗ್ನಿನೇತ್ರ ಬೇಡಲಿಕೆ

ನೊಸಲಗಣ್ಣನೆ ತೋರಿ
ದಸಮಗಣಪುಂಗವನಂತೆ ॥ ೩ ॥

ವೃದ್ಧ ವಿಟರೂಪವನು ತಾ
ಳ್ದುದ್ಧವದಿ ಬರಲು ನೋಡಿದಿ
ರೆದ್ದು ಮಂಚಕೆ ಕರೆದೊಯ್ದು
ತಾನು ಸತ್ಕರಿಸಲಾಗ
ಮುದ್ದಿಸುತೆ ಮಗ್ಗುಲೊಳೊರಗಿ ನೀನು
ನಡುವಿರುಳೆ ಭರದ
ನಿದ್ದೆಯನು ಗೆಯ್ವವಳಲಿಂಗವನು
ಕದ್ದೊಯ್ಯಲಸುವಳಿದ ಪ್ರ
ಸಿದ್ಧ ಕಮಳಾಯಿಯಂತೆ ॥ ೪ ॥

ಶ್ರೀಕರ್ಯನೆಲೆಯಪುರಿಯ
ವೋಕ ಚೆನ್ನವೀರಾರ್‍ಯ
ಲೋಕೇಶ್ವರ ಶಿವಭರ್ಗ ಭವಮೃಡನೆ
ಕೈಲಾಸಪುರಕೆ
ಬೇಕೆಂದು ತಾಂ ಬಂದು ಚಡುಪುಡನೆ
ವಂದಿಸುತೆ ಕುಳಿತು
ಏಕಾಗ್ರನಾಗಿರ್ದು ನಿಮ್ಮೊಡನೆ
ಏಕಾಂತವನಾಡಿ ಬರುವ
ಏಕಾಂತ ರಾಮಯ್ಯನಂತೆ ॥ ೫ ॥

೮೦

ನಂಬಿದೆ ನಿನ್ನ ಮರೆಯದ ದೇವಾಧಿದೇವಾ
ಹಂಬಲೆನ್ನದು ನಿಮ್ಮೊಳು ದೇವಾಧಿದೇವಾ ॥ ದ್ರು ॥

ಗಟ್ಟಿಗೊಳ್ಳದಂಥ ಮನಸ್ಸು
ಬಿಟ್ಟುಬಿಟ್ಟು ತಿರುಗಿ ಸೊರಗಿ
ಕೆಟ್ಟೆನಯ್ಯ ನಾನಾ ಜನ್ಮದಿ ॥ ೧ ॥

ಮೊದಲಿನೊಂದು ಪುಣ್ಯದಿಂದ
ಉದಿಸಿ ನಿಮ್ಮ ಪಾದಕೆ ಬಂದೆ
ಇದರೊಳು ಮರೆಯಬೇಡಯ್ಯ ॥ ೨ ॥

ಪರುಷ ಮುಟ್ಟಿದಂತಹ ಲೋಹ
ಮರಳಿ ತನ್ನ ರೂಪಾಗುವುದೆ
ಗುರುವೆ ನಿಮ್ಮ ಮುಟ್ಟಿ ನಿಮ್ಮವನಾದೆನು ॥ ೩ ॥

ನಾನು ನಿಮ್ಮವನಾದ ಮೇಲೆ
ಮಾನಭಿಮಾನ ನಿಮ್ಮದಯ್ಯ
ಏನು ಮಾಡುವುದು ನಿಮ್ಮ ಕೈಯಲ್ಲಿ ॥ ೪ ॥

ಧರಣಿಯೊಳ್ಳೆನೆಲೆಯವಾಸ
ಗುರು ಚೆನ್ನವೀರೇಶ ಎನ್ನ
ಮರಳಿ ಭವಕೆ ಬರಿಸಬೇಡಯ್ಯ ॥ ೫ ॥

೬೧

ನಂಬಿದೆನಗಜೇಶ ನಿನ್ನನು ನಂಬಿದೆ
ಶಿವನೆ ನಿನ್ನನು ನಾ ನಂಬಿದೆ
ಹರನೆ ನಿನ್ನನು ಬಹಳ ನಂಬಿದೆ
ನಂಬಿದೆ ಲೋಕಕದಂಬವ ಪೊರೆವಾ
ಡಂಬರ ವಿಶ್ವಕುಟುಂಬನೆಂದು ಬಹಳ ನಂಬಿದೆ ॥ ಪ ॥

ಸುತನಿಂದೆ ಕರುವ ಸಾಯಲಿಕೆ ಜನ
ರತಿ ಬೆರಗಾಗಿ ನೋಡಲಿಕೆ ಆ
ಸುತನಡ್ಡ ಮಲಗಿಸಿ
ರಥವನು ನಡೆಸಿದ
ಕ್ಷಿತಿನಾಥನಿಗೆ ಮೋಕ್ಷ
ಪಥವನಿತ್ತುದು ಕೇಳಿ ನಂಬಿದೆ ॥ ೧ ॥

ಮಡಿದವಲ್ಲಭನ ಬಚ್ಚಿಡುತೆ ಬಂದ
ಮೃಡನಿಗೆ ನೃಪಗೆ ಮನ್ನಿಸುತೆ ಬಹು

ದೃಢದಿ ಸೇವೆಯ ಮಾಳ್ಪ
ಮಡದಿಭಾವಕೆ ಮೆಚ್ಚಿ
ತಡೆಯದೆ ಪ್ರಾಣವ
ಪಡೆದನೆಂಬುದು ಕೇಳಿ ನಂಬಿದೆ ॥ ೨ ॥

ಪತಿಯತಲೆಯನೊತ್ತೆಯಿಟ್ಟು ಬಂದ
ಸತಿಯಳಿಗಭಯವ ಕೊಟ್ಟು ವಸು
ಮತಿ ಜನರುಗಳ
ದ್ಭುತವಾಗುತಿರಲ್ಕೆ
ಹಿತದಿ ಶಿರವನಿತ್ತು
ಪ್ರತಿಪಾಲಿಸಿದರೆಂದು ನಂಬಿದೆ ॥ ೩ ॥

ಲಿಂಗವಿಲ್ಲೆನುತೆ ಶಿಶುವನು ಕೊಲ್ಲು
ವಂಗನೆ ಧೈರ್ಯಕ್ಕೆ ನೀನು ಇಷ್ಟ
ಲಿಂಗದೊಳಗೆ ನುಡಿ
ದಂಗಜನಸುವನು
ಪೊಂಗಿ ಪೊರೆದ ಮಹಾ
ಮಂಗಳಮಯನೆಂದು ನಂಬಿದೆ ॥ ೪ ॥

ವಿತತೈನೆಲೆಯ ಪುರೇಂದ್ರ ವಿ
ಶ್ರುತ ಗುರು ಚೆನ್ನವೀರೇಂದ್ರ ದೇವ
ವಿತತಿಗಳೆಲ್ಲರನು
ಮತಿಯೊಳಿಟ್ಟಾಳ್ವ
ಪ್ರತಿಮನಖಿಳಲೋಕ
ಪಿತನೆಂಬುದು ಕೇಳಿ ನಂಬಿದೆ ॥ ೫ ॥

೮೨

ದೇವದೇವ ಮಹಾದೇವ ನೀಯೆನ್ನನು ನೋಡಲಾಗದೆ
ಸೇವಕಜನರ ದಾಸೇರನೆಂದು ದಯ ಮಾಡಲಾಗದೆ ॥ ಪ ॥

ಶಿವ ನಿಮ್ಮಭಕ್ತರ ಶಿಶುವೆಂದು ಹಿತವನೆ ನುಡಿಯಲಾಗದೆ
ಕವಿದು ಸುತ್ತಿಕೊಂಡ ಕಲುಷಪಾಶವನೆ ಕಡಿಯಲಾಗದೆ

ಪವಣರಿಯದವನ ಫಣೆಯ ದುರ್ಲಿಖಿತವ ತೊಡೆಯಲಾಗದ
ಭವಸಾಗರದೊಳಿರ್ದು ಬಳಲುವವನ ಕೈಯಿ ಹಿಡಿಯಲಾಗದೆ॥ ೧ ॥

ದೆಸೆದೆಸೆಗೆ ಬಾಯ್ದೆರೆವವನ ಮೊರೆಗೇಳಲಾಗದೆ
ಮಸಗಿ ಪೀಡಿಸುವ ಮಾಯದ ಮೊಳಕೆಗಳ ಕೀಳಲಾಗದೆ
ಕುಸುಕಿ ಕುಗ್ಗಿಸುವ ಕುಳದ ಪರ್ವತವ ಹೋಳಲಾಗದೆ
ಬಸವಳಿಯದಿರೆಂದು ಬಂದು ಧೈರ್ಯದ ಮಾತು ಹೇಳಲಾಗದೆ ॥ ೨ ॥

ವಿದಳರಾಜನ ದೋಷವಿತತಿಯನಳಿದು ನೀಪೊರೆಯಲಿಲ್ಲವೆ
ವಿಧಿವಿರಹಿತನಾದ ವಿಟಶ್ವೇತನು ಮುಕ್ತಿ ಬೆರೆಯಲಿಲ್ಲವೆ
ವಿದಿತೈನೆಲೆ ಚೆನ್ನವೀರಣಾರ್ಯ ನೀನೆ ಎರೆಯನಲ್ಲವೆ
ಪದೆದು ಲೋಕಂಗಳ ಪಾಲಿಸುವುದಕೆ ನೀ ದೊರೆಯನಲ್ಲವೆ ॥ ೩ ॥

೮೩

ಶ್ರೀಶಾಧೀಶ ಸರ್ವೇಶ ಮಾಮಕದ್ರಿಜಾ
ಧೀಶ ಫಾಲಾಕ್ಷ ದೋಷ ದೋಷಹೃತ
ಭೇಶ ಭೇಶ ಸಂಕಾಶ ಕಾಶ ಕೀನಾಶನಾಶ ಮೃಡ ॥ ಧ್ರು ॥

ಶ್ರೀಕರ ಭ್ರಾಜಿತ ತುಹಿನಾಕರ ಶೇಖರ
ಕಾಳಿಲಪನಾಬ್ಜ ದಿವಾಕರ
ಭಕ್ತೌಘ ಕೃಪಾರತ್ನಾಕರ ಮೋಕ್ಷಕರ
ಪಾಕವಿಹೃತ ನಮಿತ ಖರದ ವಿಶಿಖ ವೀರ ಸವಿತ
ಪೂರ್ವಾಲೇಖನೇಕ ಭೀಕರೇಕವಾನ್ವಿತ
ನಾಕವೋಕ ನಾಕಪಾಲ ಸುಂದರ ॥ ೧ ॥

ತಾರಕಾಧಿಪ ಕರಗೋನುತ ಬೃಂದಾರಕ
ಯಮಿಜನ ಹೃತ್ಕುವಲ ಕೋರಕ ವಿಕಸಿತ
ವಿಧು ಶತಕ್ರತು ಧಾರಕ ಶರದಾಯಕ
ಭೂರಥಾದ್ರಿ ಚಾಪ ಭುವನಧಾರ ಮಾಪರೋಪ
ಲಸಿತೋದಾರ ಶೂರ ಮಾರಮಾರಣಕ್ಷಯ ಸಾರ
ಸಾರ ತಾರ ತಾರ ಮಂದಿರ ॥ ೨ ॥

ಸ್ಯಂದನ ಭೃನ್ಮೇಚಕಗಲ ಖಸ್ಯಂದನ
ಧೃತವಿನಮಿತ ಶತಧೃತಿ ನಂದನ
ಶ್ರೀ ಚೆನ್ನವೀರ ವಿಭುವಂದನ ಐನೆಲೆಯ
ಮಂದಿರತುಳ ಶೌರ್ಯ ಪರಮಾನಂದ ಮಹಿಮಧುರ್ಯ
ಶ್ರೀಗಣವೃಂದ ಮಂದಸ್ಯಂದ ಮಂದ ವಂದಿತ
ಗಂಧ ಸಿಂಧುರಂಧಕಾರಿ ಕಂಧರ ॥ ೩

## ೮೮

ಮಿಡ ಬಾನ್ನವಿರಬಗ್ಗ ಮಿಗೆ ರಕ್ಕಿಸಯ್ಯ
ಕಡವಸಬಸನ ಮೈಯಾಗಸಪೊಚ್ಚದಲೆಯ ॥ ಧ್ರು

ಏಗಾತಸರುವವರ ಹೆದೆಯವಕ್ಕಿಗ ಬೊಮ್ಮ
ಬಾಗುಳಂ ಬಿಡಿಸುವ ಹದಿಟ್ಟ ಮಾಜೆಟ್ಟ
ಜೋಗಿಶೇಣಿಯ ಬೊರೆವ ಜೊನ್ನೊಡಲಪೊಗರ್ಮುಗುಡ
ಬೀಗುವೆನಗೀಯಜ್ಜ ಬಿಗುಯೆರ್ದೆಯಸೆಜ್ಜೆ ॥ ೧

ಇಲಿಗುಲಿಗಡಗ ಪಾವುಗುಲಿದೇರನಬ್ಬ ಮಿಂ
ಗುಲಿರುಹ ಬೆಂಗದಿರ ತಂಗದಿರ ಹಗ್ಗಿ
ನೆಲಾತಮ ಬಾನ್ಮೈಯ್ಯ ಬೆಳರ್ಮೆಯ್ಯ
ತಲೆಯಾರ ಬೈರಮರ ತಂದೆ ನೀವಿಂದೆ ಪೋಸಿಸಯ್ಯ ॥ ೨
ಹಿವಡಾಳ ಹಬೆಯತಬು ಹಗ್ಗಿ ತಿರಿಯಬ್ಬಬಾ
ಸವ ಬಿಸುಣು ಬಿಜ್ಜಗಂ ಸರಿಪ ಮೆಲ್ಲಡಿಯ
ಬಿವರದೈನೆಲೆ ಚೆನ್ನಬೀರೇಸ ಸಬ್ಬೆರೆಯ
ಅವಿದಿಡುವೆನಯ್ಯ ಅಬಯಜುತಗ್ಗೆಯ್ಯ ॥ ೩

ಟೀಕು : ॥ ಧ್ರು ॥ ಮಿಡ = ಮೃಡನೆ; ಬಾನ್ = ಆಕಾಶದಿಂದತ್ತ; ನವಿರ = ಕೇಶಗಳುಳ್ಳ; = ಭರ್ಗ; ಕಡವಸ = ಚರ್ಮವೆ; ಬಸನ = ವಸನವ ಪೊದ್ದ ಮೈಯ್ಯ, ಕಾಯವನ್ನುಳಂಥ; ಆಗಸಪೊ ಆಕಾಶದ ಹೊಳೆ; ದಲೆಯ = ಮಸ್ತಕದಲ್ಲಿ ಧರಿಸಿದಂತಹ ಶಿವನೆ ; ಮಿಗೆ = ವಿಶೇಷ ರಕ್ಕಿಸಯ್ಯ = ರಕ್ಷಿಸಯ್ಯ.

೧. ಏಗಾತಸರುವವರ = ಬ್ರಹ್ಮನ ಭ್ರೂಮಧ್ಯದಿಂದ ಉದ್ಭವಿಸಿದ ಏಕಾದಶರುದ್ರರ ; ಹೆದ = ಹೃದಯಗಳಲ್ಲಿ; ವಕ್ಕಿಗ = ಹಕ್ಕಿ ವಾಸವ ಮಾಡಿಕೊಂಡಿರುವ ; ಬೊಮ್ಮ = ಪರಬ್ರಹ್ಮಸ್ವರೂಪ ಶಂಕರ ; ಬಾಗುಳಂಬಿಡಿಸುವ = ಭಜಕರ ವ್ಯಾಕುಲವ ಬಿಡಿಸುವ ; ಹದಿಟ್ಟ = ಪ್ರತಿಷ್ಠೆಯ

; ಮಾಪೆಟ್ಟ = ಮಹಾಶ್ರೇಷ್ಠ ; ಜೋಗಿ = ಯೋಗಿಗಳ; ಶೇಣಿ = ಶ್ರೇಣಿ, ಪಂಕ್ತಿಗಳ ; ಬೊರೆವ = ಪೊರೆವ; ಜೊನ್ನೊಡಲ= ಬೆಳುದಿಂಗಳೆ ಒಡಲ ಅಂಗಮಾಗಿವುಳ್ಳ ಚಂದ್ರನ; ಪೊಗರ್ = ಕಾಂತಿಯಿಂದಯಿರುವ; ಮುಗುಡ = ಮಕುಟವನುಳ್ಳ ; ಅಜ್ಜ = ಭಗವಾರ್‍ಯ ; ಬಿಗುಯೆರ್ದೆಯಸೆಜ್ಜೆ = ದೃಢವಿರ್ದ ಮುನಿಗಳ ಹೃದಯದಲ್ಲಿ ಶಯನ ಮಾಡಿರುವ ಶಿವನೆಯೆನಗೆ; ಬೀಗು = ಹರುಷಭಾವಮೆಕೊಂಡು

೨. ಇಲಿಗುಲಿಗಡಗ = ಇಲಿಗಳ ಕೊಲ್ಲುವ ಸರ್ಪಗಳೆ ಕರ ಭೂಷಣಗಳುಳ್ಳಂಥ; ಪಾವುಗುಲಿ = ಹಾವುಗಳ ಕೊಲ್ಲುವ ನವಿಲಪಕ್ಷಿಯೆ ; ದೇರ = ವಾಹನಮಾಡಿದ ಷಣ್ಮುಖನಿಗೆ ; ಅಪ್ಪ = ಅಪ್ಪನಾದಂಥ; ಮೀಂಗುಲಿರುಹ = ಮೀನುಗಳ ಕೊಲ್ಲುವ ಬಕರೂಪ ; ಬೆಂಗದಿರ= ಬಿಸಿಕಿರಣವುಳ್ಳ ಸೂರ್‍ಯ ; ತಂಗದಿರ = ತಣ್ಣನ ಕಿರಣವುಳ್ಳ ಚಂದ್ರ ; ಹಗ್ಗಿ = ಅಗ್ನಿ ; ನೆಲ = ಪೃಥ್ವಿ; ಆತಮ= ಆತ್ಮ; ಬಾನ್ = ಆಕಾಶ; ಮೈಯ್ಯ = ಅಷ್ಟಮೂರ್ತಿಯಾದಂಥ ; ಬೆಳಮೈಯ್ಯ= ಧವಲಾಂಗನಾದಂಥ; ತಲೆಯಾರ = ದೈತ್ಯರ ತಲೆಗಳು ಹಾರ ವನ್ನುಳ್ಳಂಥ ; ಬೈರಮರ = ನವಭೈರವರ ತಂದೆಯಾದ ಶಿವನೇ ನೀವಿಂದೆ ಪೋಸಿಸಯ್ಯ = ಸಲಹಯ್ಯ.

೩. ಹಿವಡಾಳ = ಚಂದ್ರ ; ಹಬೆಯಹಬು = ಸೂರ್‍ಯ ; ಹಗ್ಗಿ = ಅನಲ; ತಿರಿಯಚ್ಚ = ತ್ರಿಲೋಚನ; ಬಾಸವ = ವಾಸವ ; ಬಿಸುಣು = ವಿಷ್ಣು; ಬಿಜ್ಜಗಂ = ಬ್ರಹ್ಮನು ; ಸರಿಪ = ಸ್ಮರಿಸುವ ; ಮೆಲ್ಲಡಿಯ = ಮೃದುಪಾದಗಳುಳ್ಳಂಥ ; ಬಿವರದ = ವಿಚಾರವನುಳ್ಳ ; ಐನೆಲೆ = ಮೋಕ್ಷಕ್ಕೆ ಮಂದಿರವಾದ ; ಚೆನ್ನಬೀರೇಸ = ಚೆನ್ನವೀರೇಶ ; ಸಬ್ಬೆರೆಯ = ಸರ್ವಕ್ಕೆ ಅಧೀಶ್ವರನಾದಂಥ ಸರ್ವೇಶ್ವರ ; ಅಬಯ = ಅಭಯದಿಂದ; ಜುತ = ಯುತ ; ಗೈಯ್ಯ = ಹಸ್ತವನುಳ್ಳ ಶಿವನೆ ; ಅವಿದಿಡುವೆ = ಮೊರೆಯಿಡುವೆನು ; ರಕ್ಕಿಸಯ್ಯ = ಪಾಲಿಸಯ್ಯ.

**೮೫**

ಈಸರನೆ ಮಾಲಿಸ್ಯೆ ಬಿಡುಕದಲೆ ನಿಚ್ಚಂ
ನೇಸರತಮಿಚಬೈರಿ ನೆರೆ ಬೊರೆವುತೆನ್ನಂ ॥ ಪ ॥

ತಿರೆತೇರ ವೆಟ್ಟುಕೋಯಂಡರಲ್ಗಣ್ಕಂಡ
ಮರುವಳುಣಿವೆದೆಯ ಮಾತಿಹುರಮುರೆಗ್ಗಳಯ
ಬರತಜುತರಿಸಿಬಿಸರ ಬಾಳಚ್ಚ ಬಲುಸೊಚ್ಚ
ನಿರುವ ನಿರ್ಗುಣ ಪೋತ ನಿರಗ ಬಿಜ್ಯೋತ ॥ ೧ ॥

ಬೊಜಗ ಕೆಜೂರ ನೀರ್ಬುಬಿಸಿಕಹಗೆಯ ಬವ
ರಿಜಬೆಜ್ಜ ತಂಡಾಳರಿಚಿರಯ್ಯಚೂಳ
ದಿಜತಂಡಪೂಜ್ಯಸಯಿ ದಿರದದೊವಲ್ಮೈಯ್ಯ ಪಯಿಂ
ಬೊಜ ಸಬ್ಬಮಂಗಳೆ ಬಿಬು ತಿಸುಳಿ ಸಯಬು ॥ ೨ ॥

ಸಂಬರರಿಯರಿ ಸಾಂತಸಪ್ಪಕೇಳವನಾಂತ
ಸಂಬುವೈನೆಲೆಯೇಸ ಚೆನ್ನಬೀರೇಸ
ಬಾಂಬೊಚ್ಚಪೆರೆದಲೆಯ ಬಾರಸಜ್ಜಮಗ್ಗೆಯ
ನಂಬಿದೆನು ಸಬ್ಬಸಹನಾತ ಬೋಗೇಸ ॥ ೩ ॥

ಟೀಕು : ಪಲ್ಲ ಈಸರ್ರ = ಈಶ್ವರ ; ಬಿಡುಕದಲೆ = ಬಿಡದಲೆ ; ನಿಚ್ಚಂ = ನಿತ್ಯಂ ನೇಸು ಸೂರ್ರ್ಯನ; ಅತಮಿಚ = ಆತ್ಮಜನಾದ ಯಮನಿಗೆ ; ಬೈರಿ = ವೈರಿಯಾದ ಶಿವನೆ ಎನ್ನಂ ; ಬೊಚ್ಚ = ಪ್ರೀತಿಸುತೆ ; ನೆರೆ = ಚೆನ್ನಾಗಿ ; ಮಾಲಿಸ್ಸೈ = ಕಟಾಕ್ಷಿಸೈ

೧. ತಿರೆತೇರ = ಭೂರಥವನ್ನುಳ್ಳಂಥ ; ವೆಟ್ಟು = ಪೊಂಬೆಟ್ಟು; ಕೋಯಂಡ =ಬಿಲ್ಲವನ್ನುಳ್ಳ ಅರಲ್ ಗಣ್ಣಂಡ = ಕಮಲಾಕ್ಷನಾದ ವಿಷ್ಣುವೆ ಬಾಣವಾಗುಳ್ಳಂಥ ; ಮರುವಳುಣಿವೆದೆಯ ವಾಯುವೆ ಉಣಿವ ಸರ್ಪನ ; ವೆದೆಯ = ಸಿಂಜಿನಿಯ ಮಾಡಿ ; ಮಾತಿಹುರ = ಮಹಾತ್ರಿಪ ಉರೆ = ರೂಢಿಯಾಗಿ; ಬಿಳಯ = ಸುಟ್ಟು ಲಯವ ಮಾಡಿದಂಥ ; ಬರತಜುತ ವ್ರತದಿ ಯುಕ್ತರಾದ; ರಿಸಿ = ಋಷಿಗಳ; ಬಿಸರ = ವಿಸರ, ಸಮೂಹವನುಳ್ಳಂಥ ; ಬಾಳಚ್ಚ = ಭಾಗ ಬಲುಸೊಚ್ಚ = ಬಹುನಿರ್ಮಲನಾದಂಥ ; ನಿರುವ = ನಿರೂಪ ; ನಿಗ್ಗುಣ = ನಿರ್ಗುಣ; ಪೂ = ಪೂತ ; ನಿರಗ = ನಿರಘ ; ಬಿಜ್ಜೋತ = ವಿಶೇಷವಾಗಿ ಪ್ರಕಾಶಿಸುವಂಥ ಶಿವನೆಯೆನ್ನ ನೋ

೨. ಬೊಜಗಕೆಜೂರ = ಭುಜಗ ಕೇಯೂರ ; ನೀರ್ಬು = ಕಮಲ ; ಬಿಸಿಕ = ವಿಶಿಖ ಬಾಣವ ಮನ್ಮಥನಿಗೆ ; ಹಗೆಯ = ವೈರಿಯಾದಂಥ ; ಬವರಿಜವೆಜ್ಜ = ಭವವೆಂಬ ರುಜಗಳಿಗೆ ವೈದ್ಯನಾದ ತಂಡಾಳ = ತಣ್ಣಿತ್ತಾದ ಕಿರಣಗಳುಳ್ಳಚಂದ್ರನ ; ರಿಚಿ = ರುಚಿ, ಕಾಂತಿಯಿಂದ; ರಮ್ಮ = ರಮ್ಯವ ಚೂಳ =ಚಂದ್ರಚೂಡವನುಳ್ಳ ಶಿವನೆ ; ದಿಜತಂಡಪೂಜ್ಯ = ಬ್ರಾಹ್ಮಣರ ಸಮೂಹದಿಂದ ಪೂಜ್ಯ ಸಯಿ= ಆಗುವಿ ; ದಿರದದೊವಲ್ಮೆಯ್ಯ = ಆನೆಯ ತೊಗಲುಟ್ಟ ಮೈಯನ್ನುಳ್ಳಂಥ ; ಪಯಿಂಬೊ = ಹತ್ತು ಭುಜಗಳುಳ್ಳಂಥ ; ಸಬ್ಬಮಂಗಳೆ = ಸರ್ವಮಂಗಳೆ ; ಬಿಬು = ವಿಭು ; ತಿಸೂ ತ್ರಿಶೂಲಿ ; ಸಯಬು = ಸ್ವಯಂಭುವೆಂಬನಾಮವನುಳ್ಳ ಶಿವನೆ.

೩. ಸಂಬರರಿಯರಿ = ಶಂಬರಾಸುರನಿಗೆ ವೈರಿಯಾದ ಮಾರನಿಗೆ ಮಾರಾರಿಯಾದಂಥ ; ಸಾ = ಶಾಂತ ; ಸಪ್ಪಕೇಳವನಾಂತ = ಸರ್ಪರಾಜನ ಕ್ಷೇಳವನು ಧರಿಸಿಕೊಂಡ ; ಸಂಬು = ಶಂ ಐನೆಲೆಯೇಸ = ಐನಿಲಯೇಶ ; ಚೆನ್ನಬೀರೇಸ = ಚೆನ್ನವೀರೇಶ; ಬಾನ್ = ಆಕಾಶದ ; ಪೊ = ನದಿಯ ಧರಿಸಿದ ; ಪೆರೆದಲೆಯ = ಬಾಲಚಂದ್ರನ ಗಂಗೆಯ ಧರಿಸಿದ ತಲೆಯನ್ನುಳ್ಳಂ ಬಾರಸಜ್ಜಮಗ್ಗೆಯ = ದ್ವಾದಶಾದಿತ್ಯರ ಆಯುಧಗಳ ಮಾಡಿ, ಸಹಸ್ರ ಮುಖ, ಎರಡು ಸಾ ಬಾಹುಗಳು, ಎರಡು ಸಾವಿರ ಕಣ್ಣುಗಳು, ಸಾವಿರ ಉರಿಗಣ್ಣುಗಳುಳ್ಳ ರೂಪಧರಿಸಿಕೊಂಡು ಆದಿತಿ ಯುದ್ಧಕ್ಕೆ ಪೋಗುವಾಗ ಹನ್ನೆರಡು ಸೂರ್ರ್ಯರ ಧರಿಸಿಕೊಂಡ ಕೈಗಳುಳ್ಳಂಥ; ಸಬ್ಬಸಹ = ಸರ್ವಭೂ ನಾತ = ಆದಿ ಭೂನಾಥನಾದಂಥ; ಬೋಗೇಸ = ಸಮಸ್ತಭೋಗಾಧಿಪತಿಯಾದಂಥ ಶಂ ನಂಬಿದೆನು = ನೆರೆ ನಂಬಿದೆನು ನಿತ್ಯಂ ಪೊರೆದು ರಕ್ಷಿಸೈ.

೮೬

ಬೇದಘೋಳಗಜೀಯ ಬಿಡದೆವ್ವೋವಯ್ಯ
ಬೇದಬಿದನಬ್ಬ ಪೆಣ್ಣೊಡೆಯ ಬಿಗುರ್ವರಿಜನಯ್ಯ ॥ ಪ ॥

ಮೋರದೇರ ಜಂತಿಮೊಗನಬ್ಬ ಮಿಡಸಬ್ಬ
ಬಾರಸಜ್ಜಮಾವಿದನೆ ಬಾಂಬೊಳೆಯದರನೆ
ಆರಡಿಬಟಗವೆದೆಯನಾರಡಿ ಬರ್ದಿಲರೆರೆಯ
ಕಾರೊಡಲಗಣ್ಣಡಿಯ ಕಬಿಲೋಗದೊಡೆಯ ॥ ೧ ॥

ಬಗ್ಗದೊವಲೊಳ್ಳುಡೆಯ ಬಗುತಬಚ್ಚಳಬಿಜಯ
ಹಗ್ಗಿ ಸುಬ್ಬರವಣ್ಣ ಹಬೆಯಾಣ್ಮಗ್ರಣ್ಣಿ
ಸಗ್ಗಾಳ್ತ ಸತಿಮತಿ ಸೌರಿ ತುತಿಗೊಲ್ದ ಜತಿ
ವಗ್ಗ ಬಲ್ಲಹ ರಿಸಬವಳಯಿಗೆಯ ಬಿಸುಬ ॥ ೨ ॥

ಪೆಕ್ಕಣಿಸುತ್ತೈನೆಲೆಯಪದಿ ಚೆನ್ನಬೀರಯ್ಯ
ಸಕ್ಕೆಮದಿಂ ಸಬ್ಬಸಾಕ್ಕಿ ಜಗದಬ್ಬ
ಪಕ್ಕ ನೀನಿಡುತೆ ಸಬ್ಬಣೇಸ ಪರಮೇಸ
ರಕ್ಕಿಸೈ ಬಿಡದೆಮ್ಮ ರಸೆಯಾಳ್ವ ಬೊಮ್ಮ ॥ ೩ ॥

ಟೀಕು : ಪಲ್ಲ - ಬೇದಘೋಳಗ = ನಾಲ್ಕು ವೇದಗಳೆ ಕುದುರೆಗಳ ಮಾಡಿದಂಥ; ಜೀಯ = ಒಡೆಯನೆ ; ಬಿಡದೆವ್ವೋವಯ್ಯ = ಎಡೆಬಿಡದೆ ಸಲಹಯ್ಯ ; ಬೇದಬಿದ = ವೇದಾದಿ ವೇದಾಂತಾರ್ಥಗಳು ಬ್ರಹ್ಮನ ಮಾನಸಪುತ್ರರಾದ ಸನತ್ಕುಮಾರಾದಿಗಳಿಗೆಯೆಪ್ಪತ್ತೊಂದು ಯುಗಪರಿಯಂತರ ಬೋಧಿಸಲಿಕ್ಕೆಬಲ್ಲ ದಕ್ಷಿಣಾಮೂರ್ತಿಯಾದಂಥ; ಪೆಣ್ಣೊಡೆಯ = ಉಮಾಸಹಿತವಾದ ವಾಮಾಂಕಪೀಠವನ್ನುಳ್ಳಂಥ ; ಬಿಗುರ್ವರಿಜ = ಕಾಲ ಭೈರವ , ಮಹಾಭೈರವಾದಿ ನವ ಭೈರವರ; ಅಯ್ಯ = ತಂದೆಯಾದ ಮಹಾದೇವ ಓವಯ್ಯಯೆಂಬರ್ಥ.

೧. ಮೋರ= ನವಿಲು; ದೇರ = ವಾಹನಮಾಡಿದ ಷಣ್ಮುಖನಿಗೆ; ಜಂತಿಮೊಗ = ಗಜಮುಖನಾದ ವಿಘ್ನೇಶ್ವರನಿಗೆ ; ಅಬ್ಬ = ಅಪ್ಪನಾದಂಥ; ಮಿಡ = ಮೃಡ ; ಸಬ್ಬ =ಶರ್ವ ; ಬಾರಸಜ್ಜಮ = ದ್ವಾದಶಾದಿತ್ಯರು ; ಆವಿದನೆ = ಆಯುಧವ ಮಾಡಿ ಪಿಡಿದ ಮಹೇಶನೆ ; ಬಾಂಬೊಳೆಯದರನೆ = ಆಕಾಶಗಂಗೆಯ ಶಿರದೊಳು ಧರಿಸಿದನೆ ; ಆರಡಿ = ಷಟ್ಪದ ; ಬಟಗ = ಆಭ್ರಮರ ಸಮೂಹವೆ; ವೆದೆ = ಹೆದೆಯ ಮಾಡಿದ ಮಾರನ ; ಆರಡಿ = ವೈರಿಯಾದಂಥ ; ಬರ್ದಿಲರೆರೆಯ = ಅಮರರ ಸಾರ್ವಭೌಮನಾದಂಥ ; ಕಾರೊಡಲಗಣ್ಣಡಿಯ = ಶಾಮಾಂಗನಾದ ವಿಷ್ಣುವಿನ ಕಣ್ಣುಳ್ಳ = ಚರಣದಿಂದೊಪ್ಪುವಂಥ ; ಕಬಿಲೋಗದೊಡೆಯ = ಕವಿಲೋಕದೊಡೆಯ.

೨. ಬಗ್ಗದೊವಲು = ವ್ಯಾಘ್ರದ ತೊಗಲೆ ; ಒಳ್ಳುಡೆಯ = ಒಳ್ಳಿತ್ತಾದ ಉಡುಗೆಯನುಳ್ಳಂಥ ;

ಬಗುತ ಬಚ್ಚಳ = ಭಕ್ತವತ್ಸಲ ; ಬಿಜಯ = ವಿಜಯ ; ಹಗ್ಗಿ = ಅಗ್ನಿ ; ಸುಬ್ಬರವ
ಶುಭ್ರಾಂಗನಾದ ಚಂದ್ರ ; ಹಬೆಯಾಣ್ಮ = ಪ್ರಭೆಗಳೊಡೆಯನಾದ ಸೂರ್ಯ; ಗಣ್ಣ = ಪ
ಕಣ್ಣುಗಳುಳ್ಳಂಥ ; ಸಗ್ಗಾಳ್ತ = ದೇವೇಂದ್ರ; ಸತದುತಿ = ಬ್ರಹ್ಮ ; ಸೌರಿ = ವಿಷ್ಣು ; ತುಹ
= ಸ್ತುತಿಗೆ ಮೆಚ್ಚಿದಂಥ ; ಜತಿವಗ್ಗ ಬಲ್ಲಹ = ಯತಿವರ್ಗ ಹಿರಿಯನಾದಂಥ ; ರಿಸಬ = ವೃ
ವಳಯಿಗೆಯ = ಪತಾಕೆಯನ್ನುಳ್ಳಂಥ ; ಬಿಸುಬ = ಮಂಗಳಮಯನಾದ ಶಿವನೆ ; ಪಾ

೩. ಪೆಕ್ಖಣಿಸುತೆ= ಪ್ರೇಕ್ಷಣಿಸುತೆ , ಅತ್ಯಂತವಾಗಿ ನೋಡುತೆ ; ಐನೆಲೆಯ = ಮೋಕ್ಷಕ್ಕೆ ನಿಲಯ
ಕೈಲಾಸಕ್ಕೆ ; ಪದಿ = ಪತಿಯಾದ ; ಚೆನ್ನಬೀರಯ್ಯ = ಚೆನ್ನವೀರಾರ್ಯ ; ಸಬ್ಬ
ಸರ್ವಸಾಕ್ಷಿಯಾಗಿರ್ದ; ಜಗದಬ್ಬ = ಜಗಜ್ಜನಕನಾದಂಥ ; ಪಕ್ಕ ನೀನಿಡುತೆ = ನೀಂ ಪಕ್ಕ ಪಕ್ಕ
; ಸಬ್ಬಣೇಸ= ಶರ್ವಾಣೇಶ ; ಪರಮೇಸ = ಪರಮೇಶ ; ರಸೆಯಾಳ್ವ = ಸಮಸ್ತ ಭೂಮಿಯ
; ಬೊಮ್ಮ= ಪರಬ್ರಹ್ಮಸ್ವರೂಪನೆ; ಬಿಡದೆ ಎಮ್ಮನು ; ಸಕ್ಕೆಮದಿಂ = ಅತ್ಯಂತ ಕ್ಷೇಮದ ದೆಶ
ರಕ್ಕಿಸೈ = ರಕ್ಷಿಸಯ್ಯ.

## ೮೭

ಮಿಡನೆ ಮುಚ್ಚುಳಿಜೀಯ ಮಿಗೆ ರಕ್ಕಿಸಯ್ಯ
ಕಡವಸಬಸನ ಕೊಡಕ ಕಳೆ ಚೂಳದಲೆಯ || ಪ

ಗಂದರಗಿವಿಯಸಬ್ಬ ಗಾಳಿಗೂಳನವೆದೆಯ
ಪಂದಲೆಯವೆಚ್ಚ ಮುಪ್ಪೊಳಲುರಿಕ ಗೊರವ
ಗೊಂದೆವಳಯಿಗೆಯ ಕರಿಗೂರಲ ಬಾಂಬೊಳೆದಲೆಯ
ಇಂದಿರಾರಡಿಗಬ್ಬವಿಕ್ಕಿದಿಳೆದೇರ || ೧

ಬಿಗುರ್ವರಿಜನಯ್ಯಸಗ್ಗಿಗರಡಬಳಂ ಬದಿಚ
ವಗೆಯ ಪಗಲೆರೆಯಚ್ಚಿ ಪೊಗರಪ್ಪಸಂಬು
ಮುಗಿಲ್ನವಿರ ಗನಹನರುಮೊಗನಯ್ಯನಾಬಗ್ಗ
ದೊಗಲುಡೆಯ ಚಳಿವೆಟ್ಟಣುಗಿಯ ಮನದನ್ನ || ೨

ತಿರೆಯಪ್ಪಲರ್ಗಳೆಯ ಸಮೀರಣಾಗಸನೇಸ
ರರಿಲಾಳುಮಾತಮಡೊಕ್ಕೆಯರನೆ ಮರುವಸಲ
ಪರಿಸರಿಯೊಳೈನೆಲೆಯಪುರ ಚೆನ್ನವೀರೇಸ
ನೆರೆ ಗಬ್ಬಗುಂಚಮುದ್ದರಿಸಿ ಜಗದಯ್ಯ || ೩

ತ್ರೀಕು : ಮುಚ್ಚುಳಿ = ತ್ರಿಶೂಲಿ; ಕಡವಸ = ಚರ್ಮ; ಕೊಡಕ = ಶೀತ, ಚಳಿ ; ಇಂದಿರ = ಇಂದ್ರ
ಆರಡಿ = ಶತ್ರು; ಬಿಗುರ್ವರಿಜ = ಭೀಕರಾಕಾರವುಳ್ಳವನು (ಭೈರವ) ಗಬ್ಬ =ಗರ್ವ, ಕಾವ್ಯ ;
ದಿಚ = ಕೆಸರಿನಲ್ಲಿ ಹುಟ್ಟಿದುದು; ಗಂದರ = ಗಾನ ; ಪಂದಲೆವೆಚ್ಚ = ರುಂಡಮಾಲಾಧರ,
ನಹ = ಹಿರಿಯ; ಆರಿಲಾಳುಮ = ನಕ್ಷತ್ರಗಳೊಡೆಯ , ಗುಂಚ = ಗುಚ್ಛ; ಡೊಕ್ಕೆ = ಶರೀರ.



೧

ಪ್ರಿಯತಮನು ದ್ರವಾಂಗಕೆ ಸೇರನೆ
ಮಯಣನಾರಕೆ ನಾನಾರೆನೆ ॥ ದ್ರು ॥

ಸುಂದರಪ್ರಿಯನು ಸುರತಕ್ಕೆಳಸನೆ
ಮಂದಿರದೊಳು ಪಳಚನೆ ॥ ೧ ॥

ಇಂದಿರಾತ್ಮಜನು ವಿಶಿಖಗಳ ತೊಡುತ
ಬಂದನೆನ್ನಮೇಲೆ ಬಿಡುತೆ ॥ ೨ ॥

ವಿಭವೈನೆಲೆ ಚೆನ್ನವೀರನೀ
ವೇಳೆಕೆ ಅಭಯವಿತ್ತರಿಸ್ನು ಸಾಕೆ ॥ ೩ ॥

೨

ಕೇಳು ರಮಣನೆವೊಲಿದು ಕೌತುಕದ ನುಡಿಯ
ಪೇಳಲಳವಲ್ಲ ಫಣಿಪತಿಗಾದಡೆನ್ನಳವೇ ॥ ಪ ॥

ಪೊಂಬಾಳೆ ಮಧ್ಯದೊಳಂಬುಜವ ಮೂಡಿ ಮುಗ
ಳಂಬಿರಿದು ಪಸರಿಸುತೆ ನವಯೆಸಳಿನೊಳು
ಅಂಬುಭವಬಾಂಧವನ ಸುತಸಹ ಚಂದ್ರಮನು
ಇಂಬುಗೊಂಡುದು ಕಂಡೆನೇನೆಂಬೆ ರಸಿಕ ॥ ೧ ॥

ತಾರಕಾನದಿಜಲವು ಮೇರುವಂ ಬಳಸಿ ಮಿಗೆ
ಏರಿದುವು ಗಗನಮಂಡಲದೊಳಿಹ ಕೋಣಕೆ
ಆರಡಿಯ ಕುಲವು ಝೇಂಕಾರದಿಂ ಸಂಪಗೆಯ
ಕೋರಕವ ಮುತ್ತಿದುದು ಕಂಡೆನೆಲೆ ಕುಶಲ ॥ ೨ ॥

ಶೀತಮಯನಾದ ಮಾರುತಸುಷ್ಣಮಯನಾದ
ಶಾತಕುಂಭದ ಲತೆಯು ಶಿಖಿಗೆ ಹಚ್ಚಿಹುದು
ಭೂತಳದೊಳ್ಯನೆಲೆಯನಾಥ ಚೆನ್ನವೀರೇಶ
ನೀ ತಿಳಿದು ಬಂದು ಕಾಯ್ವುದು ನೇಹವೆರಸಿ ॥ ೩ ॥

೩

ಜಾತಸುತೆ ನೀ ವಾರೆ ಸಖಿ ಒಯ್ಯಾರೆ
ಬಾರೆವಾರೆ ಒಯ್ಯಾರೆ
ನಗುನಗುತೆನ್ನಯ ಪೆಗಲ್ ಬಗಲ್
ಪಿಡಿದಾಲಿಂಗಿಸಿ ತಾ ಹೋದನೆ ॥ ಪ ॥

ಸುಮತೆ ರತಿರಸ ಮಮತೆ ನಾ
ಸಮರತಿಗೊಡುವೆನೆಂಬುತ
ಗಮಕವಿಹಾರಿ ಪ್ರಮುದಿತ ಲಹರಿ
ರಮಿಸದೆ ರಮಣ ಹೋದನೆ ॥ ೧ ॥

ಚದುರೆ ಮೃದುನುಡಿ ಮಧುರೆ ನಾ
ನೊದಗುವೆನುಪರತಿಗೆನುತ
ವಿಧುನಿಭವದನೆ ಕದಿರುವ ರದನೆ
ಮದನಾಗಮದೊಳು ಹೋದನೆ ॥ ೨ ॥

ವಿನಯ ಐನೆಲೆಯವನೆಯ ಚಿ
ದ್ಘನ ಗುರು ಚೆನ್ನವೀರೇಶನೆ
ಅನುಮನುನುಳಿಸಿ ತನುಗುಣ ತಿಳಿಸಿ
ಮನವನಪಹರಿಸಿ ಹೋದನೆ ॥ ೩ ॥

೪

ಬಾರನೇ ಬಾಲೆ ಎನ್ನಲ್ಲಿಗೆ ಬಾರನೇ
ಬಾರನೇ ತನ್ನಮುಖದೋರನೇ ರಸಿಕನು
ಸಾರಸುಂದರ ಸವಿಗಾರನೆನ್ನಲ್ಲಿಗೆ ಬಾರನೇ ॥ ಪ ॥

ಮಾಸಧನವನೊಪ್ಪಿಸಿದೆನು ಅಭಿ
ಮಾನ ತನ್ನೊಳು ತಪ್ಪಿಸಿದೆನು ದಿವ್ಯ
ಮಾಸಂಪದನಸು ಸಮಾಧಾನರೂಪನು ಪರ
ಮಾನಂದ ಸುಖಕೆ ಸುಮಾನದಿಂದಿಲ್ಲಿಗೆ ಬಾರನೇ ॥ ೧ ॥

ರತಿಗಲಪದೊಳಳುಕಿದೆನೆ ಉಪ
ರತಿಶ್ರಮದೊಳು ಬಳುಕಿದೆನೆ ನವ್ಯ
ರತಿದೇವಿಕಾಂತನ ರತಿಗಲೆಯೊಳಗೆ
ರತಿಯ ಬಡಿಸಿ ಬಹುರತಿಯಿಟ್ಟೆನ್ನಲ್ಲಿಗೆ ಬಾರನೇ ॥ ೨ ॥

ರಸದ್ವೈನಿಲಯೇಶ್ವರನೆ ಸಮ
ರಸ ಚೆನ್ನವೀರೇಶ್ವರನೆ ಸಾ
ರಸನೇತ್ರೇ ಮನದ ವಿರಸವ ಬಿಟ್ಟು ಪ್ರೀತಿ
ರಸವ ಹೆಚ್ಚಿಸುತ ಸರಸಕೆನ್ನಲ್ಲಿಗೆ ಬಾರನೇ ॥ ೩ ॥

೫೦

ಬಾರದೇ ನಿಂತ
ಭಾಸುರ ಕಾಂತ ॥ ದ್ರು ॥

ಅತಿಮಧುರ ವಚೋಧುರ ಚದುರ ಪ್ರಭಾನ್ವಿತ
ದುರರದನ ರಸಿಕೇಂದ್ರ
ಜಿತಮದನ ಸಾಧುಜನಸದನ ಸಮಂಚಿತ
ವದನ ನಿಪುಣ ಗುಣಸಾಂದ್ರ ॥ ೧ ॥

ನವರೂಪ ಸರಸಸಲ್ಲಾಪ ಕಳಾ
ಸುಕಲಾಪ ಮೋಹನಾಕಾರ
ಸುವಿಲಾಸ ಸುಷಮವರಹಾಸ
ಭೋಗ ಪರಿಹಾಸ ಭಾವ ಸವಿಗಾರ ॥ ೨ ॥

ಅಕಳಂಕ ಹೃದಯ ಶೋಭಾಂಕ
ಸಾರ ನಿಶ್ಯಂಕ ಸರ್ವಜಗದಾರ್ಯ

ಸಕಳೇಶ ಸದ್ಮನಿಲಯೇಶ
ಚೆನ್ನವೀರೇಶ ನಿರಘಜನಧುರ್ಯ ॥ ೩ ॥

೬

ಬಾರನೇನೆ ಭಾಮೆಯ ಬಳಿಗೆ
ಬಾರನೇನೆ ಪ್ರಿಯ
ನಾರಿಮಣಿಯ ಬಳಿಗೆ ನೀರೆ
ತೋರುವ ಬಗೆಗಳಾರಿಗೆ ತಿಳಿಯವೆ ॥ ಪ ॥

ಮೃಡನವೈರಿಯಬಲವಡರಿ ಬರುವುದು[1] ಕಂಡು
ಮಡದಿ ತಾ ಬೆದರುತ ಕುಳಿತಳು
ಬಡನಡುವಿನ ಬಾಲೆ ನಡುನಡುಗುತ ತನ್ನ
ಬಡಬಾಸೆಯನೆ ಮುಚ್ಚಿಕೊಂಡಳು
ಒಡನೆ ಬೈತಲೆಯ ಸೋಮುರ್ಮುಡಿಯ ಕೂದಲ ತೋರಿ
ಅಡಸಿ ಚಂಚಲನೇತ್ರ ತೆರೆದಳು
ಕಡುನೊಂದು ಕರತಳ ನಡೆ ಚೂರ್ಣಕಚ ನಯನ
ನುಡಿಗಳು ತನಗಿಂದು ಪಗೆಯೆಂದು ಬಗೆವಳು ॥ ೧ ॥

ವಾರಿಜಾನನೆ ತನ್ನ ತೋರಮುಡಿಯ ಬಿಚ್ಚಿ
ಚೀರುತ ಜಡೆ ಕಟ್ಟಿಕೊಂಡಳು
ಚಾರು ಚಂಪಕಕುಸುಮವಾರೈದು ವಿರಚಿಸಿ
ಹಾರ ಕೊರಳಿಗೆ ಧರಿಸಿಕೊಂಡಳು
ಮೋರೆ ಬಾಗಿಸಿ ಸರ್ಪಾಕಾರದಿ ತನ್ನ ಕೈ
ತಾರಾಮಾರ್ಗಕೆ ತೋರುತಿರುವಳು
ಸಾರಂಗಕಿರಣ ಭೃಂಗಾರವ ಘನ ಮಂದ
ಮಾರುತನುಪಟಳಕಾರದೆ ಕೆಡೆದಳು ॥ ೨ ॥

ಕಲಹಂಸಗಾಮಿನೆ ಮಮ್ಮಲಮರುಗುತ ತನ್ನ
ಮೊಲೆಯಂತೆ ಮನವಾಯಿತೆಂದಳು
ಸುಲಲಿತ ಸುರುಚಿರಮಳಗಾತ್ರೆ ತನ್ನ
ಕುಂತಲದಂತೆ ನುಡಿಯಾಯಿತೆಂದಳು

೧. ಬಾಹುದು

ಜಲರುಹನೇತ್ರೇ ಕೋಕಿಲಾಲಾಪ ಕಾಂತನ
ಒಲುಮೆ ಕಟಿಯೆಂತಾಯಿತೆಂದಳು
ವಿಲಸಿತೈನಿಲಯ ಮಂಜುಲ ಚೆನ್ನವೀರೇಶ
ನಲಸದೆ ಲಲನೆಯೊಳೊಲಿದು ಕಾಯದೆ ಕಾಂತೆ

೭

ಕಾಂತ ಬಾರ ಹಾ
ಅಹೋ ದೈವ ॥ ಪ ॥

ಧೀರವರ ಶೂರರ ಭೀರ
ಸಾರಮನೋಹರ ಸೇರದೆ ॥ ೧ ॥

ನೋತಫಲ ತಾ ತೊಲಗದೆ
ಮಾತನಯಶರಕೀಡಾದೆ ॥ ೨ ॥

ಶಾತಪ್ರದೈನಿಲಯಪುರೇಂದ್ರ
ನಾಥ ಚೆನ್ನವೀರನಿಲ್ಲದೆ ॥ ೩ ॥

೮

ಮನಸು ಮುರಿದನೇನೇ ಮನ್ನಾಥನೆ
ತನುರಹಿತನಾತುರಕೆ ತಡಮಾಡಿದುದಕೆ ॥ ಧ್ರು ॥

ಘನಮೋಹದಿಂದೆ ನೋಡುವ ಗಮ್ಮನೆ ಬರುವ
ವಿನಯದಿ ಮುದ್ದು ಬೇಡುವ ವಿಶ್ವಾಸವಿಡುವ
ಅನುನಯಿಸೆನ್ನ ಕೂಡುವ ಅಭಯವ ಕೊಡುವ
ಅನುಕರಿಸಿಂತು ನೆರೆದು ಅಗಲಿದನಲ್ಲೆ ಸಖೀ ॥ ೧ ॥

ಸಮರತಿಯನು ತೋರುವ ಸನ್ನಿಧಿಲಿರುವ
ರಮಣೇರವಿಲ್ಲವೆಂಬುವ ರಮಿಸಿ ಕರೆವ

ಮಮತೆಯೆನ್ನೊಳು ಬೀರುವ ಮನ್ನಿಸಿ ಬೆರೆವ
ಅಮಮಯೆಲ್ಲಿರುವನೋ ಪಾ ಆಡಲಿನ್ನೇನೆ ಸಖೀ ॥ ೨ ॥

ಅಭಿನವ್ಯನಿಲಯೇಶನೆ ಆತ್ಮೇಶನೆ
ವಿಭುಚೆನ್ನವೀರೇಶನೆ ವಿಶ್ವೇಶನೆ
ಅಭಿಜನ ಮಾನಸೇಶನೆ ಅಖಿಲೇಶನೆ
ಶುಭರತಿಯೊಳಗಾಗಿ ಸುಳಿಯನಿನ್ನೇನೆ ಸಖೀ ॥ ೩ ॥

೯

ಬೆಳಗ ಹರಿತೆ ಕಾಂತ ಒರಲಿಲ್ಲೆಂತ
ಅಲಸಿದನಕಟಕಟ ॥ ದ್ರು ॥

ಕುಕ್ಕುಟ ಕೂಗಿದವೆ ಪಕ್ಕಿಗಣುಲಿದವೆ
ಚಕ್ಕನೆ ತಾ ಚಕ್ರವಾಕ ನಲಿದವೆ ॥ ೧ ॥

ತಾರೆಗಳಡಗಿದವೆ ಆರಡಿ ಪಾರಿದವೆ
ಭೋರನೆ ಸಾರಚಕೋರಿ ಬಾಡಿದವೆ ॥ ೨ ॥

ಸಾರ್ಯನೆಲೆ ಚೆನ್ನವೀರೇಶ್ವರನೆನ್ನ
ಈ ರಾತ್ರಿಲಿ ಮನೆಗೆ ಬಾರಲಿಲ್ಲಬಲೆ ॥ ೩ ॥

೧೦

ಕಾಂತಾಮಣಿ ಕಾಮಪ್ರಸರಕಾನಾರೆನೆ
ಸ್ವಾಂತಾಶ್ರಯಪ್ರಿಯ ಬಾರನೆ ॥ ಪ ॥

ನಯನವಿಲಾಸಕೆ ಸೋತನೆ ಅಹ
ನಯನವಿಲಾಸಕೆ ಸೋತನೆ ॥ ಅನು ಪ ॥

ಕಿಸಲಯಕೋಮಲ ಸನ್ನಿಭಪಾಣಿ
ರಸಮಂಜುಲಮುಖ ತೋರನೆ ॥ ೧ ॥

ಶಬಲಾರ್ಭಕವಿಲೋಚನೆ ಪೃಥುಲ
ಕಬರಿ ಪ್ರಿಯತಮ ಸಾರನೆ ॥ ೨ ॥

ಸ್ಫುರದ್ವೈನಿಲಯ ಶ್ರೀಚೆನ್ನವೀರೇಂದ್ರ
ಕರುಣಾನಿಧಿ ಹಿತಕರನೆ ॥ ೩ ॥

೧೧

ಸುಮನಶರಕೆ ನಿಲ್ಲದಪಘನ ಹಾ ಸಖೀ
ರಮಣನಿಲ್ಲದೆ ನಿಲ್ಲದೀ ಮನ ಹಾ ಸಖೀ ॥ ಧ್ರು ॥

ನೂತನಪ್ರಿಯೆ ನುತಕಲಕಾಯೆ
ನಾಥನಗಲಿ ಒಡವಾದೆ ಹಾ ಸಖೀ ॥ ೧ ॥

ಮಧುಕರವಾಲೆ ಮಂಜುಲಬಾಲೆ
ಮದನಾಭನ ಕರತಾರೆ ಹಾ ಸಖೀ ॥ ೨ ॥

ಚಲುವೈನೆಲೆಯ ಚೆನ್ನವೀರಾರ್ಯ
ಒಲಿದವಳೊಳು ಮುನಿಸೇನೆ ಹಾ ಸಖಿ ॥ ೩ ॥

೧೨

ವಾರಿಜಮುಖಿ ಎನ್ನ ಕಾಂತ
ಏಕೆ ಬಾರದೆ ನಿಂತ ॥ ಪ ॥

ಸೊಕ್ಕು ಜವ್ವನೆ ಎನ್ನ ತಕ್ಕವಳೆನುತ
ಸಕ್ಕರೆದುಟಿಯ ಚುಂಬಿಸುವ
ಸಾರಸುಖದಿ ನಂಬಿಸುವ ॥ ೧ ॥

ವಾರೆನೋಟದ ಒಯ್ಯಾರೆ ಬಾರೆನುತ
ತೋರಕುಚಕೆ ನಖನಿಡುವ
ತೊಲಗದೆ ರತಿಗೂಡುವ ॥ ೨ ॥

ಸುಂದರಸುಗುಣ ಧುರಂಧರೈನಿಲಯ
ಮಂದಿರ ಚೆನ್ನವೀರೇಂದ್ರ
ಮಂಜುಲಸುಖಸಾಂದ್ರ ॥ ೩ ॥

೧೩

ಬಂದನೇನೆ ತಾಂ ಬಂದನೇನೆ ತಾಂ
ಕೋವಿದ ಹೋ ತಾಂ ಬಂದನೇನೆ ॥ ಧ್ರು ॥

ತಾಮರಸಾಕ್ಷಿಯೆ ತಾ ಮರೆದಿರದ
ಮಾಮಕ ಚೇತೋಲ್ಲಾಸಕ ॥ ೧ ॥

ಮಾನಂದನನ ಸಮಾನ ಶೋಭಾಂಕ
ಮಾನಿನಿಯೆನ್ನ ಸಮೋದಕ ॥ ೨ ॥

ಚೆನ್ನಿಲಯೈನೆಲೆ ಚೆನ್ನವೀರಾರ್ಯ
ಪ್ರೋನ್ನತ ಮಹಿಮಾವಾಸಕ ॥ ೩ ॥

೧೪

ನಿನ್ನೊರೆದರೆ ಪೇಳುವರೆ ದೂತೆ
(?) ಬಾಕ್ಷಿ ಆದೆನು ಮತ್ತೆ ತಾಳೆ
ನಿನಗೆ ಗರ್ವವಾದೀತೆ ॥ ಧ್ರು ॥

ಕೋಟಿಚಂದ್ರನ ಪ್ರಭೆಯಕಾಂತನ
ನೋಟಮಾತ್ರದಿ ಕಂಡು ಕಾಮಿನಿ
ಪಾಠೀನಕ್ಷಿಯರು ಬಂದು ಕರೆಯಲು
ಕೂಟದಲಿ ತಾ ಕೂಡಿದೆನೆ ॥ ೧ ॥

ಎಳೆಯಪ್ರಾಯದ ಕೊನಬುಗಾರನು
ಸುಳಿದು ಸುಮ್ಮನೆ ಹೋಗೆ ಸತಿಯರು

ಕಳವಳಿಸಿ ಕರೆದೊಯ್ದು ಮನೆಯೊಳು
ಒಲಿಸಿಕೊಂಡರೆ ಏನು ಮಾಡ್ವನೆ ॥ ೨ ॥

ಹಲವು ದಿನದಿಂದೊಲಿದವಳು ನಾ
ಹೊಳೆವ ಕಂಡರೆ ಮೆಚ್ಚಲಾಪನೆ
ಲಲನೆ ನನ್ನಂಗಲ್ಲೆ ಆ ಕರ
ಚೆಲುವನಿಗೆ ಮನ ಸೋಲದಿಹರೆ ॥ ೩ ॥

ಸೆರಗು ನಿಲ್ಲದೆಂಬ ಪರಿಯ ಬಲ್ಲೆ
(?)ಪ್ರಕಮಿ(?) ವಿರುಪ
ಏರು ಜವ್ವನದವಳು ಕಂಡು
ಇನ್ನಾöಗೆ ನೀನೆ ಹೇಳೆ ॥ ೪ ॥

ಲೋಲ ಐನೆಲೆಯಾಲಯನು ಕೃ
ಪಾಲ ಗುರುಚೆನ್ನವೀರೇಶನ
ಲೀಲೆಯೊಳಗಾದವಳ ಪುಣ್ಯವಿ
ಶಾಲವೆ ನಿನಗೇಕೆ ತಿಳಿಯದೆ ॥ ೫ ॥

೧೫

ವಿರುಪ ಜವ್ವನಿಯಳ ಬಿ
ಟ್ಟಾಗಿಂಗೆ ವಿಭು ಪೋಗಲಕ್ಷಿಯೊಳು ಕಂಕಣಗಳು
ತೋರುವವೆಸೆ ಬೆರಗಾಗುತೆ
ನೀರೆ ಅಡಕೊತ್ತಿನೊಳಡಕೆ ನಿಂದುದು ನೋಡೆ ॥ ೧ ॥

ಕಚಕುಚಗಳ ಪಿಡಿದು ಮಧುರ
ವಚನಗಳಾಡುತೆ ಬಿಗಿದಪ್ಪಿ ವದನದಧರ
ಪ್ರಚುರಾಮೋದದೆ ರಮಿಸಲು
ರುಚಿರಾಂಗೆ ಅಡಕೊತ್ತಿನೊಳಡಕೆ ರೂಢಿಸಿತಲ್ಲೆ ॥ ೨ ॥

ಕುಡುವಿಲ್ಲನ ಪಡಿಯವಿಟನು
ಕಡುತವಕದಿ ಬಂದು ರತಿಗೆ ಕರೆವಪ್ಪುತೆ ಮು
ದ್ದಿಡುತಂ ಮುಂಗುರುಲ ತಿದ್ದ
ಲಡಕೊತ್ತಿನೊಳಡಕೆ ಸಿಲ್ಕಿತಂಗನೆ ನೋಡೆ ॥ ೩ ॥

ಮುಡಿವಿಡಿದಾಲಿಂಗಿಸಿ ನಾಂ
ನಡೆವೆನೆನೆ ಸಡಿಲು ಬೀಳೆ ನಾರಿಯ ಬಳೆಗಳು
ನಡಿಯೆನೆನಲೊಡಿಯಲೀಕ್ಷಿಸಿ
ಅಡಕೊತ್ತಿನೊಳಡಕೆ ಸಿಲ್ಕಿತಬಲಾಮಣಿಯೆ ॥ ೪ ॥

ಮಾವಿನ ತಳಿರ್ಗಳು ಬಿರಿದವು
ಬೇವಿನದಳವೆರಡು ಬಿಗಿದು ಬೆಮರ್ದವು ನೋಡೆ
ಈವಾಳೆನೆ ಬಾಡಿದುದೆನ
ಲಾವಾಗಡಕೊತ್ತಿನೊಳಡಕೆ ಆಡಸಿತು ಸಖಿಯೇ ॥ ೫ ॥

ಉಪಕಾರಿಕದೊಳಗಿರ್ದವ
ಳುಪಕಂಠಕೆ ಬಂದು ರಮಣನುಪತಾಪಿಸುತಂ
ಉಪರತಿಗೆಳೆದೊಯ್ಯಲು ಕೇ
ಳುಪಲಸದಡಕೊತ್ತಿನೊಳಡಕೆ ಉಳಿದುದು ನೋಡೆ ॥ ೬ ॥

ತಾರಾಪಥದೊಳು ಚಂದ್ರಮ
ನೇರುತೆ ಬರಲೊಡನೆ ಮುಸುಕಿಯಲರಡಸಲ್ಕೆ
ವಾರಿಜಮುಖಿ ಜಾಂಗುಲಿಯಿಂ
ವಾರಿಸಿದಡಕೊತ್ತಿನೊಳಡಕೆ ಒಸೆದುದು ನೋಡೆ ॥ ೭ ॥

ಮುಖವನು ಮುದ್ದಿಗೆ ತಿರುಹಿದಿ
ನಖಹತಿಯೊಳು ನಿಟ್ಟಿಸಿಬೈದು ನರಳಿದಿಯೆನುತ
ಲಿಖಿಸುತೆ ಪತ್ರವ ಕಳುಹಲು
ಸಖಿ ಕೇಳಡಕೊತ್ತಿನೊಳಡಕೆ ಸಲೆ ಸಿಲ್ಕಿದುದೆ ॥ ೮ ॥

ವಿನುತೈನೆಲೆಯಪುರೇಶ್ವರ
ನನುಪಮ ಶ್ರೀಚೆನ್ನವೀರಣಾರ್ಯನು ಬಂದು
ನೆನೆನೆನೆದು ಬಾಡದಿರು ಬಾ
ಯೆನಲೀಯಡಕೊತ್ತಿನೊಳಡಕೆ ಇರ್ದುದು ನೋಡೆ ॥ ೧೦ ॥

## ೧೬ ರಾಗ – ಭೈರವಿ

ತಾನೆ ಬಾರದೆ ಹೋದ ತರುಣ ಕೇಳೆಲೆ
ನಾನು ಏನೆಂದೆ ನಮ್ಮಾತ್ರಗೆ

ಮೀನಕೇತನತಾಪ ಮೀರಿ ತನ್ನೊಳಗಿಂದು
ಮಾನಿನಿ ತಂಮು ಕೂಡಿಸೆ ಮಾತು ಮನ್ನಿಸೆ ॥ ದ್ರು ॥

ಕಬ್ಬು ಪೊಯ್ದ ಪೂಬಾಣವ
ತಬ್ಬಿಬ್ಬುಗೊಂಡು ತಾಪ
ಹಬ್ಬಿ ಹವ್ವಳಿಸುತಲಿ
ಮಬ್ಬುಗೊಂಡಿತೆ ಪ್ರಾಣವ
ಬಿಬ್ಬೋಕದಿ ನೆರೆಹೊರೆಗುಬ್ಬಸ ಹಿಡಿಯಲೆಂತೆ
ಕಬ್ಬ ಕೋಮಲ ಪ್ರಾಯವ
ಪಬ್ಬಿಸೆನ್ನದಿ ಕಾಂತನೆಬ್ಬಿಸಿ ತಂದುಸುರಿ
ತಬ್ಬಿಸಿಯಿಂದಿಗೆ ತೋರಿಸೆ ಹರುಷದಿ ಜೆರೆಸಿ ॥ ೧ ॥

ಪಲ್ಲವಾಧರಳೆ ಒಲ್ಲೆನೆಂದೆನ್ನಮೇಲೆ
ಕಲ್ಲುಗೊಂಬುದುಚಿತವೆ
ಲಲ್ಲೆವಾತಿಲಿ ಎನ್ನ ನಲ್ಲಗೆ ಬೋಧಿಸಿ
[illegible]ಗೆ ತಾರಲ್ಲೆ ಭಾವೆ
ಫುಲ್ಲಲೋಚನೆ ಕಾಂತನಿಲ್ಲದವಳ ಜನ್ಮ
ಸಲ್ಲದೇತರ ಬಾಳ್ವೆ
ಮಲ್ಲಿಗಿಬಾಣನ ಝಲ್ಲಿ ಕೆಟ್ಟದು ಎನಗೆ
ನಿಲ್ಲದೆ ತನ್ನ ಲೋಚನೆ ನೀಲಲೋಚನೆ ॥ ೨ ॥

ಸರಸ ಕೋವಿದನಗಲಿ ಸರೋವರದೊಳು ಶಶಿಯ
ಕಿರಣ ಕಾದಂತಾಯಿತೆ
ಸ್ಮರನತಾಪಕೆ ಎನ್ನ ಶರೀರ ಕೋಮಲ
ಕರಗಿ ಕಪ್ಪಾಗಿ ಹೋಯಿತೆ
ಭರಪ್ರಾಯದವಳು ಧರಿಸ್ಯಾಳ್ಹೇಗೆಂದು ತನಗೆ
ಅರಿವು ಇಲ್ಲದೆ ಹೋಯಿತೆ
ಪರಮ ಐನೆಲೆವಾಸ ಗುರು ಚೆನ್ನವೀರಜೀವ
ದೆರೆಯನೇತಕೆ ನಿಂತನೆ ಎರವಾದನೇನೆ ॥ ೩ ॥

೧೭

ಎನ್ನೊಳೇತರ ಮುನಿಸೊ ಕೋವಿದ ರನ್ನ
ಮನ್ನಿಸಿ ಮಾತ ಲಾಲಿಸೊ ಕೋವಿದರನ್ನ ॥ ದ್ರು ॥

ತುಂಬಿದಜನವ್ವು ನತಕಾಂತ
ಚುಂಬಿಸೆನ್ನ ಬಿಂಬದುಟಿಯ
ಕೊಂಬಲ್ಲಿ ನಿಂದಪೆಲ್ಲೊ ॥ ೧ ॥

ಚತುರ ಚೆನ್ನಿಗನೆ ಬಾ ಮನ
ಸೋತು ಕೂಡಿದವಳಿಗೆ
ಏತಕೆನ್ನೊಳಿಂಥ ಭೇದ ॥ ೨ ॥

ತೋರಕುಚದ ನಾರೆ ನಾ ಸವಿ
ಗಾರನೆಂದು ಕೂಡಿದವಳ
ಆರಮಾಡಿ ನೋಡುದೊಳ್ಳೆಯದೆ ॥ ೩ ॥

ಮುದ್ದು ಮುಖದ ಜಾಣ ಕೇಳೋ
ಬದ್ಧವಾಗಿರುವಂಥ ಮನಸ್ಸು
ಕದ್ದು ನೀನು ಕಳವಳಿಕ್ಕುವರೆ ॥ ೪ ॥

ಭೂವಳಿಯೊಳ್ಳೆನೆಲೆ ನಿಲಯ
ದೇವ ಚೆನ್ನವೀರೇಶಯೆನ್ನ
ಜೀವ ಭಾವ ಕಾಯ ನಿಮ್ಮದು ॥ ೫ ॥

೧೮

ಕಾಂತ ಮುನಿದಿ ಹೋಲಿಯಾಡುವುದಕೆ
ಭರಿತ ಪಿಚಕಾರಿಯ ಬಿಡುವುದಕೆ
ಸೊರಗಿ ಸೋತೆ ಬಿಡುಬೇಡವೆಂದುದಕೆ ॥ ದ್ರು ॥

ಕಚಭರಕೋಕುಳಿ ಕರ ಮೆಚ್ಚಮುದಕೆ
ಉಚಿತವಲ್ಲೇಳು ಪ್ರಿಯ ಇಡುಕೆಂದುದಕೆ ॥ ೧ ॥

ಪಟುತರದಿಂದ ಕೊಳವೆ ಪಿಡಿದ ಭರಕೆ
ಕಠಿಣಕುಚಕೆ ಬಿಡುಬೇಡವೆಂದುದಕೆ ॥ ೨ ॥

ಎಸೆವ್ವನೆಲೆ ಚೆನ್ನವೀರ ಬಿನದಕೆ
ವಶವಾದೆನು ನಿಲ್ಲಬೇಡವೆಂದುದಕೆ ॥ ೩ ॥

೧೯

ಬಾರೊ ಮನಿಗೆ ನಿನ್ನ ಬೇಡಿಕೊಂಬೆ
ಸವಿಗಾರ ಸುಗುಣ ಜಾಣ
ತಾರೊ ಮುದ್ದು ಸವಿಪಾಲ
ದುಟಿಗೆ ರಾಗಲಿರದೆನ್ನ ಪ್ರಾಣ ॥ ಧ್ರು ॥

ಚಿಕ್ಕ ಪರೆಯದವಳುಕ್ಕುತಿರುವ ಕಳೆ
ತಕ್ಕವಳೊ ನಲ್ಲ
ಕಕ್ಕಸಕುಚ ಕೂಗಲಿಕ್ಕಿ ಗಲ್ಲದೊಳ
ಗಿಕ್ಕು ಖೂನ ಹಲ್ಲ
ಮಿಕ್ಕವರಂದದಿ ನಕ್ಕು ನುಡಿದವಳ
ಠಕ್ಕು ಗುಣದವಳಲ್ಲ
ಸಕ್ಕರಿವಿಲ್ಲನ ಹಕ್ಕಿ ದಂಡು ಭೋ
ರಿಕ್ಕುದೆನಗೆ ಝುಲ್ಲ
ತೆಕ್ಕೆಯೊಳಗಭಿನಯದಪ್ಪಿಕೊಡು ಮು
ದ್ದಿಕ್ಕು ಬಾಯಿಗೆ ಬೆಲ್ಲ
ಲಕ್ಕುಮಿ ಮಗ ತಾನಿಕ್ಕಿದ ಬಾಣ ಕ
ದಕ್ಕದಿಸುವ ಬಲ್ಲ ॥ ೧ ॥

ಪಲ್ಲವಧರ ಕರ ಪಲ್ಲುತೆರೆದು ನಗಿ
ಸೊಲ್ಲನಾಡೊ ಸುಗುಣ
ಕಲ್ಲು ಮನಸು ಕರಗಲೊಲ್ಲದೇಕೆ ನ
ನ್ನಲ್ಲಿ ಇಡು ಕರುಣ
ಒಲ್ಲೆನೆಂದವರ ಜಲ್ಲನೆ ಕರೆವ
ನಲ್ಲರುಂಟೊ ರಮಣ
ನಲ್ಲ ನಾನಿಮ್ಮಲ್ಲಿಗೆ ಬಂದರೆ

ಒಲ್ಲೆನೆಂಬುದು ತರಣ
ಖುಲ್ಲತನದಿ ನೀನಿಲ್ಲ ನಿಂತರೆ
ನಿಲ್ಲದೆನ್ನ ಹರಣ
ಬಲ್ಲ ಪ್ರೌಢನೆಂದುಲ್ಲಸದಿ ನಿ
ನ್ನಲ್ಲಿಟ್ಟೆನು ಸ್ಮರಣ ॥ ೨ ॥

ವಾರೆನೋಟದೊಯ್ಯಾರಿ ಸೊಗಸು ಮಿಗೆ
ಕೀರವಾಣಿ ನಾನು
ಮಾರನಮಾವನು ಪೂರ್ವದಿಂದ ಗಗ
ನೇರಿ ಬಂದ ತಾನು ತ
ದ್ದಾರುಣಗೈಸಲೆಗಾರ ಗುರುಚೆನ್ನ
ವೀರ ನಿಮ್ಮ ದಯಾನು
ಪಾರವಿಡು ನಿಮ್ಮ
ಸಾರಿಗೆ ಬಂದವಳೆರಡಿಕ್ಕುವರೇನು ॥ ೩ ॥

೨೦

ಪ್ರಿಯ ನಿನ್ನ ಧ್ಯಾನ ಮರೆದಿರವಲ್ಲಳೊ
ನಯನುಡಿಯಳು ಮಾರಜ್ವರಕೆ ನಿಲ್ಲಳೊ ॥ ಪ ॥

ಇರುಳೆರೆಯನ ಪೋಲ್ವ ಕಳೆಮೊಗದವಳೊ
ಸರಳಬೈತಲೆ ಚೆಲ್ವ ಚಂದುಟಿಯವಳೊ
ತರಳಲೋಚನೆ ಬಹು ತರಹರಿಸುವಳೊ
ಸರಸಕೋವಿದ ನಿನ್ನ ಸ್ಮರಿಸುತಿರುವಳೊ ॥ ೧ ॥

ಸುಲಲಿತ ಕಂಜಕೋರಕ ಕುಚದವಳೊ
ಸೆಳೆನಡು ಮತ್ತಮಧುಕರ ಕಚದವಳೊ
ತಳಿರಡಿ ಸಾರ ಮಧುರ ವಚನದವಳೊ
ಕಳವಳಿಸುತ ನಿನ್ನ ಬರವ ನೋಡುವಳೊ ॥ ೨ ॥

ಕುಸುಮಾಯುಧನುಪಟಳ ಪರಿಹರಿಸೊ
ಬಸವಳಿದವಳ ಹರವಸ ತಿಳಿಸೊ

ಮಿಸುಪೈನೆಲೆಪುರವರನೆ ಬಂದೊಲಿಸೊ
ರಸಿಕಚೆನ್ನವೀರೇಂದ್ರ ರಮಿಸಿ ಪಾಲಿಸೊ ॥ ೩ ॥

೨೧ .

ಮರೆಯದಿರೊ ತಾರೇಶವದನ ಪ್ರಾಣ
ದೆರೆಯ ನಿನ್ನನು ನಂಬಿದೆ
ಕಿರಿನಗೆಮೊಗನೆ ಬಿದುಬಂಧುರದಂತ
ಅರೆನೋಟದರೆದೆನ್ನ ನಿರೀಕ್ಷಿಸಿ ಮನ್ನಿಸಿ ॥ ಧ್ರು ॥

ನಿಲಯದಿ ನಿಮ್ಮ ಪಾದಾಬ್ಜದಿ ನಿಬ್ಬೆರಗಿಲಿ
ಮಲಗಿದೆ ನಾನು ಚಿಂತಿಸುತ
ಅಳಿಯರಸಂಚೆ ನವಿಲು ಕೋಕಿಲಗಳು
ಗಳವೆತ್ತಿ ಘನಸ್ವರಮಾಡುತ
ಗಿಳಿಮರುತನು ಪೆರ್ಬಲಗೂಡಿ ಬಂದೆನ
ಗಲರಶರದಿವೊಯ್ಯಲಳುಕಿದೆನೆಲೆ ಪ್ರಿಯ ॥ ೧ ॥

ಸ್ಮರನ ತಾಪವು ಪರಿಪರಿಸಿ ಎನ್ನೊಳಗೆ (?)
ಸ್ತರಂದು ನಿಮ್ಮ ನೆನೆದೆನು
ಪೊರಿಯೊ ಬಂದು ಜೊನ್ನವು ಚಕೋರ ಮಂದ
ಮರುತನಗೂಡಿ ಬೇಗನೆ
ಶರಧಿನಂದನ ತನ್ನಕಿರಣದಿವೊಯ್ದರೆ
ತರಹರಿಸುತಲೆನ್ನ ಹರಣವಳಿಸಿದನಂದೆ ॥ ೨ ॥

ಒಲಿದವಳೊಡನೆ ಇಂಥ ಛಲವ ಸಾಧಿಸುವುದು
ಫಲವೆ ನಿನಗಿದುಚಿತವೆ ಸಲಿಗೆ
ಒಲಿದು ನೀಯೆನ್ನೊಳುಗೂಡಿ ಕಡೆಯಲಿ
ತೊಲಗುವರೆ ನಿಮಗುಚಿತವೆ
ಬಾಳಿನೊಳಗೈನೆಲೆಯ ಚೆನ್ನವೀರೇಶ
ಹಲವುಕಾಲದಿ ನಿಮ್ಮನೊಲಿದು ಕೂಡಿದವಳ ॥ ೩ ॥

## ೨೨

ಇಂದುಮುಖಿಯಳನಗಲಿ ರಮಣನೆ
ಇನಿತು ಕಾಡುವುದುಚಿತವೆ
ಮಂಪಗಮನೆಯ ಮನವನಪಹರ
ಮಾಡಿ ಮುನಿವುದು ವಿಹಿತವೆ ॥ ಪ ॥

ಕಬ್ಬುವಿಲ್ಲನ ಕಣೆಗಳುಪಟಳ
ನಿಬ್ಬರಲಿಯದೆ ಪೋಪಳೆ
ತಬ್ಬಿ ಮುಸುಕಿದ ತುಂಬೆ ಪಿಕ ಧ್ವನಿ
ಯಬ್ಬರಕೆ ನಿಲಲಾಪಳೆ ॥ ೧ ॥

ಎರಳೆಗರುವನ ನೆರಳು ತಾಕಲು
ತರುಣಿ ತಾಪದಿ ನಿಲ್ಲಳೆ
ಇರುಳೆ ತೀಡುವ ಮರುತ ಸೋಕಲು
ಶರೀರ ಧರಿಸಬಲ್ಲಳೆ ॥ ೨ ॥

ಅಚ್ಚಮಲ್ಲಿಗೆಮಾಲೆ ಎದೆಯೊಳ
ಗೆಚ್ಚ ಸೂಜಿಗಳೆಂಬಳೊ
ಪಚ್ಚೆರುವ ತಂಪೆಸೆವ ಗಂಧವು
ಕಿಚ್ಚು ಕಿಡಿಗಳೆಂಬಳೊ ॥ ೩ ॥

ನೀಲಕಂಠಗೆ ರಾಹುರಾಮಗೆ
ವ್ಯಾಲನಿಗೆ ತಾ ಬಯ್ವಳೊ
ಪೇಳಲಳವಲ್ಲಕಟಪಸ್ಮಾರ
ಜ್ವಾಲೆಗವಳತಿ ಸುಯ್ವಳೊ ॥ ೪ ॥

ಸುಂದರೈನೆಲಧಾಮ ಚೆನ್ನವೀ
ರೇಂದ್ರ ರಾಜಿತ ಸೋಮನೆ
ಇಂದವಳ ಹೃತ್ಕುಮುದವಲರಿಸು
ಬಂದು ಸುಖದಭಿರಾಮನೆ ॥ ೫ ॥

೨೩

ನಿಲ್ಲೊ ನಿಲ್ಲೊ ನಿಲ್ಲೊ ನಮ್ಮನೆಗೆ ಬಾರೊ
ಒಲ್ಲೆ ಒಲ್ಲೆನೆಂಬುದಲ್ಲ ಒಲಿದು ಸಾರೊ ॥ ಪ ॥

ಮಿಕ್ಕ ಮಾನಿನಿಯರಂತಲ್ಲ ನೀ ನೋಡೊ
ತೆಕ್ಕೆಗೊಪ್ಪುವಳೆನ್ನ ಬಿಡುಬೇಡೊ ॥ ೧ ॥

ಮಧುರಮಾತುಗಳಿಂದ ವಿರಹ ತುಂಬಿಸುವೆ
ಅಧರಾಮೃತವೆರೆದು ಚುಂಬಿಸುವೆ ॥ ೨ ॥

ಪರಿಮಳ ಗಂಧ ಕಸ್ತೂರಿಯ ಪೂಸುವೆನೊ
ಸೆರಗಿಲಿ ತಂಗಾಳಿ ಬೀಸುವೆನೊ ॥ ೩ ॥

ನೀಟುಕಾರನೆ ನಿನ್ನ ಮರಿಲಾರೆನೊ
ಮೊಟುಜವ್ವನ ಧರಿಸಲಾರೆನೊ ॥ ೪ ॥

ಸುರುಚಿರೈಸಲೆ ಚೆನ್ನವೀರೇಶ್ವರನೆ
ಉಚಿತ ಚಿತ್ತವಿಹಾರ ಸುಖಕರನೆ ॥ ೫ ॥

೨೪

ಬಿಡುಬೇಡ ಬೆರೆದವಳ ಕಾಡಬೇಡ
ಬೇಡಹೋಗು ತಡಮಾಡದೆ ಸುಖರತಿ
ಗೀಡಾಗಿ ಒಡಗೂಡಿದವಳ ॥ ಪ್ರ ॥

ಅಕ್ಕರವಲಿ ನಿನ್ನ ತೆಕ್ಕೆಯೊಳಗಲದೆ
ನಕ್ಕು ನೇಹದಿ ಮುದ್ದಿಕ್ಕುವವಳ ॥ ೧ ॥

ಸಮರತಿಯೊಳು ಮೈಬೆಮರನೊರಸಿ ವಿ
ಭ್ರಮಿಸಿಹ ಕ್ಷತಿಗೆ ಕ್ಷಮಿಸುವವಳ ॥ ೨ ॥

ಫುಲ್ಲನಯನೆ ಕೆಸರ್ಮಲ್ಲಿಗೆಗೋಲನ
ಝಲ್ಲಿಗೆ ದೃಷ್ಟದಿ ಭುಲ್ಲವಿಸುವವಳ ॥ ೩ ॥

ನೀಟುಕಾರ ನಿನ್ನ ಕೂಟದೊಳಗೆ ಸವಿ
ನೋಟವೆರಸಿ ಕಣ್ಣು ಮಿಟುವವಳ ॥ ೪ ॥

ಅಭಿನವೈನಿಲಯ ವಿಭು ಚೆನ್ನವೀರನೆ
ಅಭಯವಿತ್ತು ನಿನ್ನ ಭೀತದೊಳಿರುವವಳ ॥ ೫ ॥

೨೫

ನಾರಿಮಣಿಯೇ ನಾಥ ಮನೆಗೆ
ಬಾರದೆ ನಿಂತ ಸಖಿಯೇ
ವಾರಿಜಾಕ್ಷಿ ವದನವೆನಗೆ
ತೋರನೇ ಕಾಂತ ಸಖಿಯೇ ॥ ಪ ॥

ಮಾನಧನವ ತನಗೆ ಸೂರೆ
ಮಾಡಿಕೊಟ್ಟೆನೆ ಸಖಿಯೇ
ಮಾನಿನೆ ಪ್ರಿಯನಂಘ್ರಿಯಲ್ಲಿ
ಮನಸನಿಟ್ಟೆನೆ ಸಖಿಯೇ ॥ ೧ ॥

ಕುಟಿಲಗುರುಳೆ ಕೇಳೆ ನಾ ವ್ಯಾ
ಕುಲದಿ ನೊಂದೆನೆ ಸಖಿಯೇ
ಕುಟಿಲಮಾರನಂಬಿನಿಂದ
ಕುಸಿದು ಬೆಂದೆನೆ ಸಖಿಯೇ ॥ ೨ ॥

ಎರೆಯನಿಂತು ಎರವುಗೆಯ್ದು
ದೇನು ಬಲ್ಲೆನೆ ಸಖಿಯೇ
ಮರುಳು ಮಾಡಿದ ನಲ್ಲನ
ಮರೆದು ನಿಲ್ಲೆನೆ ಸಖಿಯೇ ॥ ೩ ॥

ಬೇಡಿಕೊಂಬೆ ಸೆರಗನೊಡ್ಡಿ
ಬಂದುನೋಡೆನ್ನ ಸಖಿಯೇ

ಮಾಡಿದಪರಾಧೇನೆ ತನಗೆ
ಮುನಿಸಬೇಡೆನ್ನ ಸಖಿಯೇ ॥ ೪ ॥

ವರದೈನೆಲೆಯ ವರನು ಕರುಣ
ವಿಟ್ಟರೆ ಸಾಕೆ ಸಖಿಯೇ
ಕರೆದು ಚೆನ್ನವೀರನಭಯ
ಕೊಟ್ಟರೆ ಸಾಕೆ ಸಖಿಯೇ ॥ ೫ ॥

೨೬

ಒಲ್ಲೆನೆಂಬುವುದೇನೆ ವಾರಿಜಾನನೆ
ನಲ್ಲೆ ನೀ ಕೇಳೆ ಆತನಲ್ಲೆ ಮುನಿಸು ಭಾಳೆ ॥ ಪ ॥

ವದನಸಂಯೋಗದೊಳು ವಂಚಿಸಿದೆನೆ
ಪ್ರೇಮಕದನಾಲಿಂಗನದೊಳು ಕಪಟಿಯಾದೆನೆ
ತನ್ನ ರದನಸಗಾಯದೊಳತಿ ರಾಗಿಯಾದೆನೆ
ಮದನಾಗಮದೊಳಾನೆ ಮನಸು ಮುರಿದನೆ ॥ ೧ ॥

ಕನ್ಯವಯಸ್ಸಿನೊಳು ಕಾಡಿದವಳೆ
ನಾನು ಮನ್ನಿಸದೆ ಎರವು ಮಾಡಿದವಳೆ
ತನ್ನನನ್ಯರೊಡನೆ ಕೂರಚಾಡಿದವಳೆ
ಇನ್ನೇನೆಂಮುಸುರಲೆ ಇವನಗಲಿದ ಮೇಲೆ ॥ ೨ ॥

ಸಾರೈನಿಲಯದೊಳು ಸ್ಮರಿಸಲಿಲ್ಲೆ
ಚೆನ್ನವೀರೇಶನೊಳು ಮನವಿರಿಸಲಿಲ್ಲೆ
ಸುವಿಚಾರಭಾವದೊಳಾಚ[illegible]ಸಲಿಲ್ಲೆ
ಆರಯ್ದರೇನಿಲ್ಲ ಆತನ ಗುಣವ ಬಲ್ಲೆ ॥ ೩ ॥

೨೭

ತಾಳಲಾರೆನೆ ಪಾಲನ ಕಾಣದೆ
ನೀಲವೇಣಿಯೆ ನಿಲ್ಲಲಾರೆ ತಾಳಲಾರೆನೆಯೆಮ್ಮ
ಒಯ್ಯಾರಿಭಾವೆಯೆ ಎಮ್ಮಕಸ್ತೂರಿಗಂಧೆ ॥ ದ್ರು ॥

ಚಿಕ್ಕತನದಿ ನಾ ಸಿಕ್ಕಿದೆಳೆಯಳ
ತಕ್ಕೆಯಗಲಿ ಎನಗಿಕ್ಕಿದ ಬರಪವು || ೧ ||

ಕಾತರ ಪೆಚ್ಚಿತು ಪ್ರೀತಿಗೊಂಡು ಮನ
ಸೋತು ನೊಂದೆ ಮದನಾತುರದಿಂದೆ || ೨ ||

ಎಳೆಬೆಳದಿಂಗಳ ಗಿಳಿ ಅಳಿಕೋಗಿಲ
ಗಳಪಸ್ವರಕೆ ನಾನುಳಿಯಲಾರೆನೆ || ೩ ||

ಮೊಗರಿಮೊಗ್ಗಮೊಲೆ ಬಿಗಿದವೆ ಬಿರ್ರನೆ
ತಿಗರಿಟ್ಟಗಂಧವು ನೆಗೆದು ಹೋಯಿತೆ || ೪ ||

ಮುಂಪರಿಯದೆ ನಾನೊಂದುಗೂಡಿದೆನೆ
ಬಂಧನ ಬಿಡಿಸೆನೆಂದು ಅರಿಯನೆ || ೫ ||

ಕೆಟ್ಟ ಮನ್ಮಥನ ಅಟ್ಟುಳಿಗಾರೆನೆ
ಕಟ್ಟುರಿಪಿನೊಳಿಟ್ಟು ಹೋದನೆ || ೬ ||

ಚಿಂತೆ ಬಿಡದು ಮನಭ್ರಾಂತಿಯ ಹೋಗದೆ
ಕಂತುವನಗಲಿ ನಾನೆಂತು ಜೀವಿಸಲೆ || ೭ ||

ನಾಥನಗಲಿದ ಸುಡು ಏತರ ಜನ್ಮವ
ಕಾತ ಫಲವು ಸಲಿಸುವಾತನ ಬಿಟ್ಟು || ೮ ||

ಧರೆಗೆ ಐನೆಲೆವಾಸ ಗುರುಚೆನ್ನವೀರೇಶ
ಕರ ಸೂರೆಗೊಂಡವನ ಮರೆಯಲಾರೆನೆ || ೯ ||

೨೮

ಏ ಸುಗುಣೆ ಬರಲೊಲ್ಲನೆ ಮನೆಗೆ
ಏನು ಮಾಡಿದೇನ ತನಗೆ
ಭಾಷೆ ಪಾಲಿಪ ಒಡನೆಯೆಂದು
ಬಹಳ ಪರಿಯಲಿ ನಂಬಿದೆನೆಂದು || ಪ ||

ಅವಗುಣಗಳು ಕಂಡನೆನ್ನೊಳು
ಆತನಿಗೆ ನೀ ಕೇಳೆಲೆ
ಜೀವಮುಳಿವುದು ಸಂಕಟವೆಂದು
ಜಾಣನಿಗೆ ನೀ ಪೇಳೆಲೆ
ಕಾವನಿಕ್ಕಿದ ಕಮಲಂಬಿಗೆ
ನಾ ಕಾತರವೆಂತು ತಾಳಲೆ
ಏ ವನಿತೆ ಏನೆಂಬೆ ಸುದ್ದಿಯೆನಗೀ
ವೇಳೆಗೆ ತಂದು ಮುಟ್ಟಿಸಿ ಪೋಗೆಲೆ ॥ ೧ ॥

ನಾರಿ ನೀನು ಪೋಗಿ ಕರೆದರೆ
ನಲ್ಲನ ಮನಸಿಗೆ ಬಾರದೆ
ಮೀರಿಯೆನ್ನನು ಜರಿದರಾತಗೆ
ಮಿಗಿಲುಪಾಯವನು ತೋರದೆ
ಆರಾದಡೇನು ಸರಿಗರತರೆನ್ನ
ಅಂತರಿಸಿದರು ಸೇರದೆ
ವಾರಗಿಪುರುಷನು ಬಾರದೆ ಹೋದರೆ
ನೀರೆಯೆನ್ನ ಜೀವವಿಂದುಳಿಯದೆ ॥ ೨ ॥

ಎಂದಿಗಗಲನುಯೆಂದು ಕಾಂತನೊಳು
ಎರವಿಲ್ಲದೆ ಕೂಡಿದೆನೆ
ಮುಂದಮತಿಯಲಿ ತಿಳಿಯದೆ ನಾನು
ಮನವು ಸೂರೆಮಾಡಿದೆನೆ
ಸುಂದರನೆಯೆನ್ನಗಲದಿರೆಂದು
ಸೆರಗೊಡ್ಡಿ ಬೇಡಿದೆನೆ
ಚಂದದಿ ಐನೆಲೆ ಚೆನ್ನವೀರೇಶನು
ಎಂದಿಗೆ ಬಿಡವೆನ್ನ ಕರದೊಳು ಬೆರೆದನೆ

೨೯

ನಾಥ ಬಾರನೆ ಸಾರೆ ಪ್ರಿಯೆ
ನಾಥ ಬಾರನೆ ಸಾರೆ ಪ್ರಿಯೆ ॥ ಪ ॥

ಅತಿಹಿತಲೋಲನ ಚಲಿಸ ಪೂರೈಸಿದೆ
ಅತುಳ ಕಪಟಕಾರೆ ಪ್ರಿಯೆ ॥ ೧ ॥

ಪರಿಪರಿಗೊಂಡು ರತಿಕಲಹಮೊಳಾದೇನೆ
ವಿರಹ ಸೈರಿಸಲಾರೆನೆ ಪ್ರಿಯೆ ॥ ೨ ॥

ಲಸಿತ್ಯೆಸೆಲೆಗೃಹ ಚೆನ್ನವೀರಾರ್ಯನ
ಒಲಿಸಿ ಪಹಿಲನೆ ತೋರೆ ಪ್ರಿಯೆ ॥ ೩ ॥

೩೦

ನಾರಿಮಣಿಯೆ ಕರತಾರೆ ತಾಳಲಾರೆ ಮುಖ
ತೋರಿ ತೋರದೆ ಹೋದ ಮುನಿದು ಒಯ್ಯಾರೆ ॥ ಪ ॥

ಚತುರನಗಲಿದ ಕಾತರ ಹೆಚ್ಚಿತು
ಏತರ ಮುನಿಸೆನ್ನಮೇಲೆ ಕೇಳೆ ಬಾಲೆ
ಮನಸೋತು ಕೂಡಿದೆ ಚಿಕ್ಕವಳೆ ಅನುಗಾಲೆ
ಹೋಗೆ ದೂತೆ ಕೊಡುವೆ ಕಂಠಮಾಲೆ ಉಟ್ಟಶಾಲೆ
ಮಾರನಾತುರದೊಳಗಾದೆ ಏನು ಹೇಳಲೇ ॥ ೧ ॥

ಮಲ್ಲಿಗೆ ಮೊಗದ ಕೆಂಬೆರಲು ಕೆಂದುಟಿ ಜಾಣ
ನೆಲ್ಲಿ ನಿಂತನೋ ಭಾಷೆ ಕೊಟ್ಟ ಮಾತುಬಿಟ್ಟ
ಸೀತುಗೊಟ್ಟ ಕರಹಲ್ಲಿನ ಗಾಯಗಳಿಟ್ಟ ಬಹುದಿಟ್ಟ
ಎನ್ನಗಲ್ಲ ಪಿಡಿದು ಮುದ್ದುಕೊಟ್ಟ ಮನಮುಟ್ಟ
ಕಬ್ಬುಬಿಲ್ಲಿನಾತನೊಳೆನ್ನ ಸೆರೆಮಾಡಿಬಿಟ್ಟ ॥ ೨ ॥

ಅರವಿಂದಮುಖಿಯಳೆ ಕರಚೆಲ್ವನೊಳು ನಾನು
ಎರವು ಒಂದಿನ ಮಾಡಲಿಲ್ಲ ಕಾಡಲಿಲ್ಲ
ಎನ್ನ ಜರಿದು ಬಿಡುವುದು ಒಳ್ಳೆದಲ್ಲ ರತಿಯಲ್ಲ
ಹಗಲಿರುಳು ತನ್ನ ಮರೆಯಲಿಲ್ಲ ಮನದಲ್ಲ
ಸತ್ಯಗುರು ಚೆನ್ನವೀರನು ಐನೆಲೆವಾಸನಲ್ಲ ॥ ೩ ॥

೩೧

ಭಾಮಿನಿ ಬಾರೆ ಸುಜನಿ ಬಾರೆ
ಸಖಿ ಸುಜನಿ ಬಾ ಕಾಂತೆ ಕಾಂತೆ
ಇನನ ತೋರೆ ಸಾರೆ ॥ ದ್ರು ॥

ಭಾಸುರಕಂಜಾಸ್ಯ ಬಾಲೆ ವಿಲಾಸೆ
ಭೂಸುರಲಿಂಗಾರೆ ಸಾರೆ ॥ ೧ ॥

ಕಲಭೋಪಮಯಾನೆ ಕಲಕಲಧ್ವಾನೆ
ಅಲಿಕಲರವಕಾರೆ ಸಾರೆ ॥ ೨ ॥

ಚೆನ್ನವೀರಾಚಾರ್ಯ ಚಣದ್ವೈನಿಲಯ
ಮನ್ನಿಸಿ ಕರತಾರೆ ಸಾರೆ ॥ ೩ ॥

೩೨

ಕಾಮಿನೆ ಪ್ರೀತನ ಕರಿಯೆ ಕರಿಯೆ
ರಜಮುಖಿ ಕರಿಯೆ ಕರಿಯೆ
ವಿಸಜನಿಭನಯನೆ ಕಾಮಿನೆ ॥ ದ್ರು ॥

ನೂತನಪ್ರಿಯನೆ ಕಾತರಿಸುವನೆ
ಏನೆಸಖಿ ಏತರಮುನಿಸು ನೀನರಿಯೆ ॥ ೧ ॥

ಸರಸದಿ ಕೂಡೆ ವಿರಸವು ಬೇಡೆ
ಹರಿ[೧][ಣಾಕ್ಷಿ ][೧] ಹರುಷಕಲಹದೊಳು ನೆರಿಯೆ ॥ ೨ ॥

ಸನ್ನುತ್ಯೆನೆಲೆಯ ಚೆನ್ನವೀರಾರ್ಯ
ಏನೆ ಸಖಿ ಮನ್ನಿಸಿ ಕರೆದು ನೀ ಬೆರಿಯೆ ॥ ೩ ॥

೧-೧ ಗೋದ್ಯಕಿ

೩೩

ಮದನಸುಪ್ರೀತನ ಸಖಿ ತೋರೆ ನೀ
ಮದನಸುಪ್ರೀತನ ತೋರೆ ॥ ಪ್ರ ॥

ಚಾತಕ ಬಲ್ಲದೆ ಭೂತಲವಾರಿ
ಏತಕೆ ಸುಖಕರ ಸುಂದರನಿಲ್ಲದೆ ॥ ೧ ॥

[೧][ಜಲಧಿಯ][೧]ನಲ್ಲದೆ ನಲಿವುದೆ ಹಂಸ
ಅಲಿಕಚೆ ಮಮ್ಮಲ ಮರುಗುವ ಮನ ನಿಲ್ಲದೆ ॥ ೨ ॥

ಶಶಿಕಾಂತ ಮಣಿಕೆ ಒಸರುವುದೇನೆ
ವಿಶದೈನಿಲಯ ಸುಚೆನ್ನವೀರೇಶನ ॥ ೩ ॥

೩೪

ಮದನರೂಪನಗಲಿ ಎನ್ನ
ಮನೆಗೆ ಬಾರನೆ ಸಖಿಯೇ
ಮುದದಿ ಮೋಹಿಸಿಬಂದು ತನ್ನ
ಮುಖವದೋರನೆ ಸಖಿಯೇ ॥ ಪ್ರ ॥

ಮಾನಧನವ ತನಗೆ ಸೂರೆ
ಮಾಡಿಕೊಟ್ಟೆನೆ ಸಖಿಯೇ
ಮಾನಿನಿಯೇ ನಮ್ಮವರನೆಲ್ಲ
ಮರೆದು ಬಿಟ್ಟೆನೆ ಸಖಿಯೇ ॥ ೧ ॥

ತೆಕ್ಕೆಗೊಪ್ಪುವಳೆಂದು ಮುಸುಕ
ತೆರೆದೆನ್ನಪ್ಪುವನೆ ಸಖಿಯೇ
ಅಕ್ಕರದಿ ಪಿಡಿದಧರಾಮೃತವ
ನಡಸಿ ಚೀಪುವನೆ ಸಖಿಯೇ ॥ ೨ ॥

ಭಾಮಿನಿಯೆ ಸಂಭೋಗಾಲಯಕೆ
ಬಾ ಬಾ ಎಂಬುವನೆ ಸಖಿಯೇ

೧-೧ ಜಲಜವ

ಕೋಮಲಾಂಗಿ ಸವಿಮುದ್ದಿದು ನೀ
ಕೋಕೋ ಎಂಬುವನೆ ಸಖಿಯೇ ॥ ೩ ॥

ಮಾರನಾಟದಿ ಮಸಗಿ ವಂಚನೆ
ಮಾಡಿದವಳಲ್ಲ ಸಖಿಯೇ
ಆರಡಿಗಿಕ್ಕಿ ಎನ್ನಿಗರೊಳೇ
ನಾಡಿದವಳಲ್ಲ ಸಖಿಯೇ ॥ ೪ ॥

ಓತ್ಯನಿಲಯ ಚೆನ್ನವೀರೇಂದ್ರ
ನೊಲಿದರೆ ಸಾಕೆ ಸಖಿಯೇ
ನಾಥನಾಂಘ್ರಿಯೊಳೆನ್ನ ಮನವು
ನಲಿವರೆ ಸಾಕೆ ಸಖಿಯೇ ॥ ೫ ॥

೩೫

ಏ ಬಾರೆ ಪ್ರಿಯನ ತೋರೆ
ಏಣಾಕ್ಷಿ ಬೇಗನೆ ಸಾರೆ
ನಾ ಬೇಡಿಕೊಂಬುವೆ ನೀರೆ ॥ ಪ್ರ ॥

ಮಧುರವಿಲ್ಲನ ಕೇಳಿಯೊಳತಿ ಚದುರ
ಬಾರನೆ ಮಂಗಳಗದಿರ
ಪೋಪೋಗೆ ಪಲ್ಲವಾಧರೆ ॥ ೧ ॥

ಓಪ ಒಯ್ಯಾರ ಸರಸ ಸಲ್ಲಾಪ
ಕಾಮಾಗಮಾಬ್ಧಿ ಕಲಾಪ
ತೊಲಗಿದನೆ ಪೆಚ್ಚಿತೆ ತಾಪ ॥ ೨ ॥

ಈಶವಿನುತ್ಯನೆಲೆ ಚೆನ್ನವೀರೇಶ
ಎಂದೆಂದಿಗಗಲ ಮದೀಶ
ಇಂದೇಕೆ ತೊರೆದ ನಿವೇಶ ॥ ೩ ॥

೩೬

ಜಾಣೆ ಕರತಾರೆ ಆತನ ಪ್ರಾಣನಾಥನ
ಕಾಣದೆ ನಾ ಜೀವಿಪುದೆಂತೆ
ಮಾಣದೆ ನೀ ತಂದು ಕೂಡಿಸೆ ಮುಂತೆ ॥ ಪ ॥

ಚಿಕ್ಕಪ್ರಾಯದ ಕಾಂತನೆ ಚದುರೆ ನೀ ಕೇಳೆ
ಸಕ್ಕರಿಸವಿಮಾತಿನ ಸುಂದರನೆ ಸರಸದಿ ಅವನೊಳು
ಸಿಕ್ಕಿದವಳಿಗೆ ಸರಿಯೇನೇ
ಕಕ್ಕಸಮೊಲೆಗುಗುರೊತ್ತುವೆನೆಂದ
ಚಕ್ಕನೆ ಚೆಂಮುಟಿಸವಿದೋರೆಂದ
ಅಕ್ಕರಮಾತೇನದು ಹೇಳೆಂದ
ತಕ್ಕವಳೆನಗಹುದೆಂದ ॥ ೧ ॥

ನಗುನಗುತಲಿ ಸೆರಗ ಪಿಡಿವನೆ ಆ ಕೋವಿದಯೆನ್ನ
ಮಗಿದುರುಬು ತಿದ್ದಿ ನೇವರಿಪನೆ ಒಯ್ಯಾರದಿ ನೋಡಿ
ಸುಗುಣೆ ನೀ ಸೈ ಸೈಯೆಂಬುವನೆ
ಬಿಗಿದಪ್ಪಿಕೊಂಬುವೆ ಬಾ ಬಾಯೆಂದು
ಸೊಗಸಿನ ಮುದ್ದಿದು ಕೋ ಕೋಯೆಂದು
ಮೊಗದೊಳು ಮೊಗಮಿಡು ತಾ ತಾಯೆಂದು
ಅಗಲಿರಲಾರೆನು ಪೋ ಪೋಗೆಂದು ॥ ೨ ॥

ಕಲ್ಲೆದೆಯವನಲ್ಲೆಯೆನ್ನ ಪ್ರಿಯ ಮಲ್ಲಿಗೆಪೂಶರನ
ಝಲ್ಲಿಗೆ ಗುರಿಮಾಡಿದನೆ ಕಾಯ ಶ್ರೀಚೆನ್ನವೀರೇಂದ್ರ
ಸಲ್ಲಲಿತೈನೆಲೆಯಪುರನಿಲಯ
ಒಲ್ಲೆನೆಂದರೆ ಉಪರತಿಗೂಡೆಂದ
ನಲ್ಲೆ ಪ್ರೇಮದ ಕಲಹವ ಮಾಡೆಂದ
ನಿಲ್ಲು ನಿನ್ನೊಳು ವ್ಯಾಕುಲವ ಬೇಡೆಂದ
ಎಲ್ಲಿದ್ದರೇನು ನಾ ನಿನಗೆ ಜೋಡೆಂದ

ವರನ ತೋರೆ ನೀರೆ ವಾರಿಜ
ಶರನಬಾಧೆಗಿನ್ನಾರೆ ಒಯ್ಯಾರೆ ॥ ದ್ರು ॥

ಶಾತೋದರಿ ಭರದೆ ಶಯನದೊ
ಳೋತು ನೆರೆಯೆ ಬರಿದೆ ಜರಿದೆ
ನಾಥನೊಳೇನಿಲ್ಲೆ ನನ್ನೊಳೆ
ಕೈತವಗಳು ಭಾಳೆ ಕೇಳೆ
ಪ್ರೀತಾಕರನ ಘನಾತುರಕಾಗದ
ನೂತನಾಂಗವಿನ್ಯಾತಕೆ ಕೌಮುದಿ
ಮಾತೆ ಅಡವಿಯೊಳು ಕಾತಂತಾಯಿತೆ
ನೀ ತಡೆಯದೆ ಬೆರಸೆ ತರುಣೀಮಣಿ ॥ ೧ ॥

ಕಮಲಛತ್ರಗೊಳುತೆ ಕಾಮನು
ಕಮಲಶರವ ತೊಡುತೆ ಬಿಡುತೆ
ಸುಮನೋಮಾರ್ಗದೊಳೆ ಸುಳಿದರೆ
ಸುಮನದವಳೆ ಪೇಳೆ
ಭ್ರಮರ ಕೀರ ಹಯ ಕುಮುದವನಪ್ರಿಯ
ಸಮುದಯ ಸಹಿತಾಕ್ರಮಿಸಿ ಮಸಗುತ
ರಮಣನಗಲಿದ ಪ್ರಮದಾವಳಿಗಾರ್ದಯರು
[ಸುಮತೆ ನೀ] ನೀಗಲೆ ಗಮಿಸೆ ಬೇಗನೆ ॥ ೨ ॥

ಕಾಂತ ಮುನಿದ ಮೇಲೆ ಕಾಮಿಸಿ
ಕಾಂತಿ ಅಡಗಿತಲ್ಲೆ ನಲ್ಲೆ
ಎಂತಿದಕುಸುರಬಲೆ ಅರಿಯೆನು
ನಿಂತನೇಕೊ ಅಲ್ಲೇ ಬಲ್ಲೇ
ಕಾಂತ್ಯನೆಲೆಯ ನಿಶಾಂತ ಸದಾ ನಿ
ಶ್ಚಿಂತ ಚೆನ್ನವೀರೇಶ್ವರನಮಲ
ಸ್ವಾಂತನಂತರಿಸಿ ನಿಂತನಲ್ಲೆ ಬಳಿ
ಕಂತಕಮೊಳಗೆನ್ನ ತವಕ ತಿಳಿಸೆ ॥ ೩ ॥

೩೮

ಏಕೆ ತಡವ ಕೇಳೆ ನೀಕರಿಸಿದನು ಹೇಳೆ
ಬೇಕಾಗದ ತನಗೆ ಎನ್ನ ಮನೆಗೆ ॥ ಪ ॥

ಏಕೆ ಬಂದನು ತಿಳಿಯೆ ಸಖಿಯೇ ॥ ಅನುಪಲ್ಲ ॥

ಹಿರಿಯನೆಂಬನೆ ಬಾಣಾಸುರನ ಬಾಗಿಲುಕಾಯ್ದ
ದೊರೆಯನೆಂಬೆನೆ ತಲೆದೋಗಿಯೊಳುಂಬುವನು ॥ ೧ ॥

ಹೇಸದೆ ಜೆನ್ನನೊಳು ಲೇಸಿಲಿ ಕೂಡುಂಡ
ಕೂಸಿನ ಕೊಲ್ಲಿಸಿ ನಲಿಸಲಿದುಂಡನು ॥ ೨ ॥

ಸೂಳಿನಿಂಬಿಯ ಮನೆಗೆ ಹೇಳದೆ ಹೋದನೆ
ಏಳುದಿನೆನ್ನ ಮನೆ ಬಾಗಿಲು ತೆರೆಸಿದ ॥ ೩ ॥

ಕಮಳದೇವಿಗೊಲಿದು ಅಮಳಲಿಂಗವ ಕದ್ದು
ಭ್ರಮಿಸಿ ಅವಳಯೆನ್ನ ಬಳಿಲಿ ತಂದಿರಿಸಿದ ॥ ೪ ॥

ಕುಟ್ಟುವ ಒಸಕೆಯ ಪೆಟ್ಟಿಗೆ ಹೆದರಿದನೆ
ಹುಟ್ಟಲಿರಿಸಿಕೊಂಡ ಹೇಡಿಯೆನ್ನಲ್ಲಿಗೆ ॥ ೫ ॥

ಪಾತರವವಳಿಗೆ ದೂತನಾದನೆ ಭೂಮಿ
ನಾಥ ನಂಬೆಣ್ಣನಿಗೆ ಹಡಪಿಗನಾದನು ॥ ೬ ॥

ಕ್ರೂರದೈತ್ಯನಿಗೆ ಏರುಯೆತ್ತಿನ ಎನ್ನ
ಸೇರಿಸಿಕೊಟ್ಟನೆ ಸಲಪಲಾರದೆ ॥ ೭ ॥

ತಾಂಬರೊಡವೆ ಕಾವಿಯೆಂಬರೆನಗೆ ದಾಸಿ(?)
ನಂಬಿಗೊಲಿದು ಹೊನ್ನಮಳೆಯನು ಸುರಿದನು ॥ ೮ ॥

ಕ್ಷಿತಿಯೊಳೈನೆಲವಾಸಪತಿ ಚೆನ್ನವೀರೇಶ
ಗತಿಯು ತಾನಲ್ಲದೆ ಹಿತರು ಇನ್ನಾರೆ ॥ ೯ ॥

೩೯

ಏ ಹಿಮಕರಾನನೆ ಬಾರನೇ
ಸುಹಿತಮನೋರಮ ಹಾ ಸಖೀ ॥ ಪ ॥

ಸಾರಸಾರಿ ಶೀತಜಾತ ವೇದೇಷ್ಟವಿಹಾರಿ
ಕೀರ ಪರಭೃತ ಮದಮಧುಕರ ಪಂ
ವಾರಸಹಿತ ನಲಿನಲಿದು ಮಾರರಾಜನಿದೆ
ಬಂದ ಬಂದನೆ ಅಹಿಭೂಷಣಕಬರೀ ಹಾ ಸಖಿ
ಸಾರೆ ಸಾರೆ ತಂದು ತೋರೆ ಪ್ರಾಣೇಶನ ನೀರೆ ॥ ೧ ॥

ಚೂತಜಾತಿ ಪಾರಿಜಾತ ನೀಲಾಬ್ಜಶೋಕೆ
ಶಾತಕಲಂಬ ನೀರಘಾತಕ್ಕೆ ನಿಲ್ಲಲಾರ
ಶಾತೋದರಿ ತನುವೇಕೆ ಸೋತೆನಲ್ಲ ನಾ
ನೂತನಾಂಗಗೆ ಚಕಿತಮೃಗನಯನ ಹಾ ಸಖಿ
ನಾಥನಿಂದ ಪಾರಿಜಾತದಿ ಬಯಲಿಗೆ ಬಂದೆ ॥ ೨ ॥

ಸುಂದರಾಂಗೆ ಪ್ರಿಯ ಬಂದಪುದೆಂತೊ ಬಾಲೆ
ಮಂದಸ್ಮಿತಮುಖಿ ಮಹಿತೈನೆಲೆಪುರ
ಮಂದಿರ ಚೆನ್ನವೀರೇಂದ್ರ ಬಂದು ನಿಂದು ಬಾ
ಳೆಂದು ಪೋದನೆ ಕಠಿಣಪಯೋಧರಿಯೆ ಹಾ ಸಖಿ
ಮಂದಗಮನೆ ಕಾಂತನಿಗೆ ಸೆರೆಗೊಟ್ಟೆನೆ ಥೇನೆ ॥ ೩ ॥

೪೦

ಒಲ್ಲನೇ ವನಿತ ನಿನ್ನಲ್ಲಿಗೆ ಒಲ್ಲನೇ
ವನಜಾಸ್ಯೆ ನಿನ್ನಲ್ಲಿಗೆ ಒಲ್ಲನೇ
ಒಲ್ಲನೇ ಸಖಿ ನಿನ್ನ ವಲ್ಲಭನಿಲ್ಲಿಗೆ
ಖುಲ್ಲತನದಿ ರತಿಯಲ್ಲಿ ವಂಚಿಸಿದೆಂದು ಒಲ್ಲನೇ ॥ ದ್ರು ॥

ಕುಟಿಲಕುಂತಲಗಳ ತೀಡಿ ಬಹು
ಕಠಿಣಕುಚಕೆ ಕೈಯನೀಡಿ ಒತ್ತಿ

ಪಟು ತೆಕ್ಕೆಯೊಳಗಿಕ್ಕಿ ತುಟಿಗೆ ತಾಂಬೂಲದ
ಗುಟುಕ ನೀಡಲು ಜರಿದು ಸೆಟೆದು ನಿಂತಳೆಂದು ॥ ೧ ॥

ಚಪಲಾಕ್ಷಿ ಬಾ ಎಂದು ಕರೆದು ಪ್ರಿಯನು
ವಿಪುಲ ಶಯ್ಯೆದೊಳಿಟ್ಟು ನೆರೆದು ನೋಡಿ
ಅಪಘನಗಳ ಸೋಂಕಿ ನಿಪುಣತ್ವ ತೋರೆನಲು
ಉಪರತಿಯೊಳು ಮುನಿದು ಕಪಟ ಮಾಡಿದಳೆಂದು ॥ ೨ ॥

ಮಕರಕೇತನ ತಾಪದಿಂದೆ ನೊಂದು
ನಿಕಟದಿ ನಿಂದೊಲವಿಂದೆ ವಿಟನು
ಸುಕಲಾಪ ಸಮರತಿ ಸುಖಭೋಗಕೆಳೆಯಲು
ಮುಖ ಸಂಯೋಗದಿ ತನ್ನ ಮುಖ ತಿರುವಿದಳೆಂದು ॥ ೩ ॥

ಬಟ್ಟಜವ್ವನವೆಂದು ಬಗೆದು ಮುಸು
ಕಿಟ್ಟ ಮುಂಜೆರಗವ ತೆಗೆದು ನಗುತೆ
ನೆಟ್ಟನೆ ಬಂಧಂಗಳಿಟ್ಟು ನೆರೆಯಲಿಕೆ
ಸಿಟ್ಟಿನಿಂದ ಬಯ್ದು ಬಿಟ್ಟು ಹೋದಳೆಂದು ॥ ೪ ॥

ವರದೈನೆಲೆಯಮಂದಿರನು ನಿನ್ನ
ವರ ಚೆನ್ನವೀರೇಶ್ವರನು ನಿ
ರ್ಭರ ಸತ್ಕಾರಗಳರಿದು ಮಾಡದೆ ನಿ
ಷ್ಠುರ ಬುದ್ಧಿಯಲಿ ತನ್ನ ಮರೆದಳೆಂದು

೪೧

ಬಾರೆಲೆ ಸೀಮಂತಮಣಿಮಾನ್ಯೆ
ಭಾವಕಿಗುಣರನ್ನೆ
ಆರಡಿ ಕುಂತಳೆ ಶುಕನುಡಿ ಕಂಠೀರವ ಮಧ್ಯ
ಜಂಭೀರವರ್ಣ ಮೈ
ವಾರಿಜಕುಟ್ಮಲ ಕುಚ ಗುಣ
ಗಂಭೀರೆ ಸಿಂಧೂರಬಾರೆ ಒಯ್ಯಾರೆ ॥ ಪ ॥

ಅಂಗಜನ ಲಲಾಟದಿ ಪುಟ್ಟಿದ ತಾಪ
ಆ ತೀವಿದ ಕಲಾಪ
ತಿಂಗಳ ಚಕೋರಕ ಕೋರಕವೋಪ
ಕಂಗೊಳಿಸುವ ಕನಕ ಪುತ್ಥಳಿ
ಬೊಂಬೆ ಕಮಲಪೂದುಂಬೆ
ಹೆಂಗಳೆ ಕುರಂಗಾಕ್ಷಿಯೆ ಅನಂಗನ ತಾಪವು
ಹಿಂಗಿಸು ಜಾಣೆ ॥ ೧ ॥

ಏರಿತು ಮದನಾತುರವೆಂಬುದಿಂದೆ
ಎರಕಾಯಿತುಯಿಂದೆ
ಮೀರಿತು ಹೂಕ್ಕತ ವಿರಹದ ಜ್ವರದಿಂದೆ
ಮಿತಿಯಿಲ್ಲದೆ ನೊಂದೆ
ಭಾರತ ಹುಣ್ಣಿವೆಯ ಚಂದ್ರಕಾರೆ
ಕಂಡು ಸೈರಿಸಲಾರೆ
ನಾರಿ ನಿನ್ನ ಬೆಡಗು ಓರೆನೋಟ ಮೊನೆ
ಊರಿದುದಕೆ ಮನಸೂರೆ ಹೋದೆನೆ ॥ ೨ ॥

ದಗದಗಿಸುವ ತಾಪದಿಂದೆ ಬಸವಳಿದೆ
ದಯಪುಟ್ಟದೆ ಕೆಳದೆ
ನಗುಮೊಗಸಿರಿ ಕೋಮಲವಳಿದೆ
ನಸುಗುಂದಿದವಳಾದೆ
ಜಗಕ್ಕೆನೆಲೆನಿಲಯಕರಪುರಧೀಶ
ಗುರು ಚೆನ್ನವೀರೇಶ
ಮಿಗೆ ಸುಲಲಿತ ಯುಗಚರಣಕೆ
ಕರ ಮುಗಿಯೆ ಬಗಿಯೆ ಮಾಡಿ ನಂಬಿಗೆಯ ॥ ೩ ॥

೪೨

ತೋಯಜಾಸನನೆ ಕೇಳೆ ಕಾಯಜನ ಗೆಲಿವೋ
ಪಾಯ ಜಾನಿಸೇ ನಿನ್ನೊಳು
ಮಾಯವಲ್ಲಭ ಪನ್ನಸಾಯಕಗಳನೊಡ್ಡಿ
ಪ್ರಾಯನ್ವಿತರಿಗೆಲ್ಲಪಾಯ ಮಾಳ್ಪನೆ ಸಖಿಯೇ ॥ ಪ ॥

ಆತಪತ್ರಕೆ ನಿನ್ನ ನೂತನ ಕರವೆತ್ತೆ
ನೂತಗೆ ಹಿಣಿಲೆತ್ತಿ ಸಲೆ ತೋಱಿಸ
ಏತದ್ವಿಭ್ರಮ ರಸಘಾತಕ್ಕೆ ಗ್ರೀವದೊ
ಳೆತಳೆದ ಕನಕಸೃಗು ನೀ ತೋಱಿಸ ಸಖಿಯೇ ॥ ೧ ॥

ಶುಕವಾಜಿಗಳಿಗೆ ಮುದ್ರಿಕೆ ವೈಘೂರ್ಯವ ತೋಱೆ
ಪಿಕಸಂಚಯಕೆ ನೀ ಮಸ್ತಕ ತೋಱಿಸೆ
ಚಕಿತಾಕ್ಷಿ ಮಾರನಂಬಕಕಗ್ನಿ ರಪಿ ಜೈವಾ
ತೃಕ ವೃಕ್ಷಿ (?) ಮನುಗಳ ಪ್ರಕಟಿಸೆ ಹೇ ಸಖಿಯೇ ॥ ೨ ॥

ಧ್ವಜಕೆ ಬತ ರುದ್ರಾಖ್ಯಂ ಭಜಿಸೆ ಬತ್ತಳಿಕೆಗೆ
ಗಜಕೃತ್ತಿಧರನೆಂಮುಗ್ಘಡಿಸಿ ಮಿಗೆ
ವೃಜಿನಾಂತಕ್ಕೆನಿಲಯ ನಿಜ ಚೆನ್ನವೀರಾಖ್ಯಂ
ಪ್ರಜಪಿಸಲಳುಕಿ ಚಿತ್ತಜ ನೋಡುವನೆ ಸಖಿಯೇ ॥ ೩ ॥

೪೩

ಗಮನಭಂಗಿ ಸಾರೆ
ಪಾರಿಜಾಸ್ತ್ರ ನಿಭಂಗ ಜಾರ
ಗಜಗಮನಭಂಗಿ ಸಾರೆ ॥ ಪ ॥

ಮಾಲತಿ ಮಾಕಂದ ಲಸವರವಿಂದ
ನೀಲೋತ್ಪಲಶೋಕ ಲಲಿತ ಮಾರ್ಗಣ
ಧೃತಕರಮಾರಂ ಆಲೋಕಿಸಿ ಪೊಡೆವಂ ॥ ೧ ॥

ಕೀರ ಚಂಚರೀಕ ಕೋಕಿಲ ಪೃಥುಕ
ಪಾರಾವತ ಪ್ರಮುಖ ಮಾರಭೂಪಸೇನ
ರವಕಾರ ಚಾರು ಪಯೋಧರಿಯೆ ॥ ೨ ॥

ಶೋಭಿತೈನಿಲಯ ಚೆನ್ನವೀರಾರ್ಯ
ಶೋಭನ ಸಚ್ಚರಿತಂ ಶಾಬಕ ಹರಿಣ
ವಿಲೋಚನೆ ಪೂರ್ಣಚಂದ್ರನಿಭಾನನೆ ಸುಮತೆ ॥ ೩ ॥

೪೪

ಏನೆ ಸಖಿ ನಿನ್ನಂಗವೆಂತು ವರ್ಣಿಸಲೆ
ಮೀನಾಂಕನುಪವನವೊ ಮಿಗೆ ನಿನ್ನಯಪಘನವೊ ॥ ಪ ॥

ಅಡಿ ಪಲ್ಲವಂ ಪೊಳೆವತೊಡೆ ಬಾಳೆಗಿಡದೆಡೆ
ನಡು ಸಿಂಪ ನಡೆ ಹಂಸ ತಿಗವೆ ಗುಲ್ಲುಗಳು
ಕಡುಸೊಬಗಿನಂಗ ಲತೆ ಕರಚೂತವೆಳೆದಳಿರು
ಒಡಲಪೊಕ್ಕುಳ ಪುತ್ತು ಒಡಬಾಸೆ ಫಣಿ ರಮಣಿ ॥ ೧ ॥

ಏರುಜವ್ವನದ ಕಾಸಾರದೊಳು ಮುಖ ಕಮಲ
ವಾರೆನೋಟಗಳ ಕುಮುದಗಳ ಮೇಲೆ
ಸೇರಿರುವ ಕುಂತಲಗಳಾರಡಿಯ ಬಳಗವತಿ
ತೋರಕುಚ ಜಕ್ಕವಕ್ಕಿಗಳು ನೋಡಬಲೆ ॥ ೨ ॥

ಮುಡಿ ನವಿಲು ಸ್ವರ ಪಿಕವು ನುಡಿಗಿಳಿಯು ಸಹವಾಗಿ
ಒಡತೆ ಪರಿಶೋಭಿಸುವ ವನಲಕ್ಷ್ಮೀ ನೀನೆ
ಪೊಡವಿಯೊಳ್ಳೆನೆಲೆಯ ಒಡೆಯ ಚೆನ್ನವೀರೇಂದ್ರ
ಬಿಡದೆ ನಿನ್ನಪಘನದ ವನಕೆ ಮಾಧವನೆ ॥ ೩ ॥

೪೫

ಬಾಲಕಿ ಪರಿ ಪರಿ ಸೋಜಿಗದಂದವ
ಮಾಲಿಸಿ ನೋಡೆ ನೋಡೆ ಮಾನಿನಿ ಛಂದವ ॥ ದ್ರು ॥

ಒದವಿದಜವ್ವನೆ ನದಿಸೈಕತಶ್ರೋಣಿ
ಮಧುಪ್ರಿಯ ಸಮಾಕುಂತಲ ಶರಚ್ಚಂದ್ರಮುಖಿ
ಬಿಂಬಾಧರೀ ಪರಿ ಸೋಜಿಗದಂದವ ॥ ೧ ॥

ಮಂದಸ್ಮಿತರುಚಿ ಕುಂದರದನ ಶುಚಿ
ಸುಂದರ ಕಂಜಕೋರಕ ಕುಚೇ ಶಬಲದೃಕಿ
ತನುಧಾರೀ ಪರಿ ಸೋಜಿಗದಂದವ ॥ ೨ ॥

ಲಲಿತ್ಯನೆಲೆವಾಸತುಳ ಚೆನ್ನವೀರೇಶ
ಸಲೆ ನೇರಪಾದಕೆ ಸುಖಮಯ ಸ್ವಪುಗಾರ್ತಿ
ಹಿತಕಾರೀ ಪರಿ ಸೋಜಿಗದಂದವ ॥ ೩ ॥

೪೬

ಮರೆದೆ ಆ ಕೋವಿದನ ಕೂಡಿರದೆ
ನೀ ತೊಲಗದಿರೆಂದೊರೆದೆ
ಏಣಾಕ್ಷಿ ರತಿಸುಖ ತೋರದೆ
ಹರಷೆ ಘರೆದೆ ನೀ ಮರೆದೆ ॥ ಧ್ರು ॥

ಮದನ ಸಂತಾಪಕೆ ಬಾಡಿತು ವದನ
ಮುನಿದಿಂಡು. ಆತನ ಸದನ
ಬಿಡುವರೆ ಕುಂದರದನ
ನಿನ್ನೊಳು ಕೂಡಿವನ ॥ ೧ ॥

ಬಾಲೆ ಇಂದೀವರನೇತ್ರವಿಶಾಲೆ
ಮದನಾಗಮ್ಮದೊಳನುಕೂಲೆ
ಏ ರಂಭೆ ಮಧುಕರವಾಲೆ
ಆ ಕಾಂತನ ಲೀಲೆ ॥ ೨ ॥

ಪ್ರಿಯನ ವಿನುತ್ಯನೆಲೆ ನಗರಾಲಯನ
ಶ್ರೀ ಚೆನ್ನವೀರಾಶ್ರಯನ
ಆನಂದ ತೇಜೋಮಯನ
ಏ ಚಂಚಲನಯನೆ ॥ ೩ ॥

೪೭

ಬೆರೆದವನೊಳು ಮುನಿ
ದಿರುವರೇನೆ ನೀರೆ
ಅರೆಗಳಿಗೆಗಲದ ವರನೊಳು ಒಯ್ಯಾರೆ ॥ ಧ್ರು ॥

ಬೆದಗಾರ್ತಿಯರಂತೆ ಬೇಡಿ ಕಾಡುವರೆ
ಬೆದರಸೋಟದ ಭಾವ ಬೇರೆ ಮಾಡುವರೆ
ಮದನಕೇಳಿಯೊಳಗೆ ಮನವ ಮುರಿವರೆ ॥ ೧ ॥

ಕುಲಸತಿಯಾದ ಮೇಲೆ ಕೊರಬಾಡುವರೆ
ಅಲಸದ ಪ್ರಿಯನೊಳು ಅರಸಿ ನೋಡುವರೆ
ಸುಲಲಿತಾಲಿಂಗನದಿ ಸೋತು ಪಳಿವರೆ ॥ ೨ ॥

ಪ್ರವಿಮಲೈನಿಲಯನ ವಿನಯದಿಂದೊಲಿಸೆ
ರಮಣ ಚೆನ್ನವೀರಾರ್ಯನಂ ಬಿಸಿಗಲಸೆ
ಸುಮತೆ ಮಹಾನಂದ ಸುಖದೊಳು ಫಲಿಸೆ ॥ ೩ ॥

ಳಲ

ಕೇಳೆ ಬಾಲೆ ಕಾಮಿನಿರನ್ನೆ
ಆಳಿದಂಥ ಪ್ರಿಯನ ಕೂಡಿ
ಬಾಳುವೆಯ ಮಾಡು ಕಂಡೆ
ಭಯವು ಇಲ್ಲೆ ಕೇಳೆ ಬಾಲೆ ॥ ಪ ॥

ಸಂತಿಯಸಂಗತಿ ನಿನ್ನ
ಪಂಥಕ್ಕಾರು ಬರುವರಿಲ್ಲೆ
ಎಂತೆಂಥವರಿಗಿದ
ರಂತೆ ನೋಡೆ ಕೇಳೆ ಬಾಲೆ ॥ ೧ ॥

ದಿಮ್ಮಿದರ ಶ್ರೇಯದೊಳ
ಗೊಮ್ಮನದಿ ಕೂಡು ಕಂಡೆ
ಬ್ರಹ್ಮ ವಿಷ್ಣು ಪದವಿಗಿಂದ
ಲಿಮ್ಮಡಿಯೊಳೆ ಕೇಳೆ ಬಾಲೆ ॥ ೨ ॥

ಪತ್ತು ಮಂದಿ ನಿನ್ನ ತಲೆಯ
ನೆತ್ತಿ ಬಾಳೆ ಮಾಡಗೊಡರ

ಎತ್ತ ಮಿಸುಕದಂತೆ ಬಹಳ
ಜತ್ತನಿರೆ ಕೇಳೆ ಬಾಲೆ ॥ ೩ ॥

ಎಂಟು ಕೋಣಗಳು ಬೆ
ನ್ನಂಟಿಕೊಂಡು ತಿರುಗುತಾವೆ
ಗಂಟಲವ ಮುರಿದುಕೊಂದು
ಒಂಟಿಲಿರೆ ಕೇಳೆ ಬಾಲೆ ॥ ೪ ॥

ಹಿರಿಯ ಮನೆಯ ಬಳಸಗೊಡದ
ದುರುಳಗುಣದ ಮುದಿ ಅತ್ತೆಯ ಹಲ್ಲ
ಮುರಿದು ಹೊಕ್ಕು ಮೂರುಮನೆಯ
ತೆರೆದು ನೋಡೆ ಕೇಳೆ ಬಾಲೆ ॥ ೫ ॥

ಆಳಿದವರ ಅರಿಯದೆಷ್ಟು
ಬಾಳಿದರೆ ಫಲವು ಇಲ್ಲೆ
ಗಾಳಿಗಿಟ್ಟ ದೀಪದಂತೆ
ಪೇಳಲೇನೆ ಕೇಳೆ ಬಾಲೆ ॥ ೬ ॥

ಪಕ್ಕಿವೊಂದು ಕಂಡಕಡೆಗೆ
ಪಕ್ಕವಿಲ್ಲದೆ ಹಾರಿ ನಿನ್ನ
ದಕ್ಕಗೊಡದು ಪಂಜರದೊ
ಳಿಕ್ಕು ಕಂಡೆ ಕೇಳೆ ಬಾಲೆ ॥ ೭ ॥

ಅಷ್ಟ ಕೊಂಬೆಗಳಿಗೆ ತಾ
ನಟ್ಟಿ ಹಾರುತಿರುವ ಪಿಕವ
ನಿಷ್ಠೆಯಿಂದ ಪೂರ್ವಕೊಮ್ಮೆ
ಗಿಟ್ಟಿರಮ್ಮ ಕೇಳೆ ಬಾಲೆ ॥ ೮ ॥

ಬಂಧು ಬಳಗ ಮನೆಯವರ
ಕೊಂದು ಸುಟ್ಟು ನೀನೊಬ್ಬಳೆ
ನಿಂದಮೇಲ ತಿರುಗಿ ಬರುವ
ದೇವಿಗಿಲ್ಲ ಕೇಳೆ ಬಾಲೆ ॥ ೯ ॥

ಆರು ಚಕ್ರವರ್ತಿಗಳ
ಮೀರಿ ರಾಜ್ಯವಾಳುತಿರುವ

ಮೂರುಪುರವಹೊಕ್ಕು ರತ್ನ
ಸೂರೆಮಾಡಿ ಕೇಳೆ ಬಾಲೆ ॥ ೧೦ ॥

ವರದೈನೆಲೆಯೊಳು ಧಾಮ
ಗುರುವು ಚೆನ್ನವೀರೇಶನು
ಕರದೊಳು ವಾಸವಾದ ಮೇಲೆ
ಸ್ಥಿರವು ನೀನೆ ಕೇಳೆ ಬಾಲೆ ॥ ೧೧ ॥

೪೯

ಎಂತು ಬದುಕಿದೆ ನೀನು ಎಲೆ ರಾಜವದನೆ
ಸಂತತಂ ವೈರಿಗಳು ಸಂಗಮಾಗಿರುತಿರಲು ॥ ಪ ॥

ರಾಕೇಂದುಚಂದ್ರಿಕೆಯು ರಾತ್ರಿಯೊಳು ರಾಜಿಸಲು
ಕೋಕಮಿಥುನಗಳೇನು ಕೊರಗದಿಹವೇನೆ
ಕೇಕಿಗಳುಕದೆ ಕಾಳುರಗ ಜೀವಿಪುದು
ಲೋಕದೊಳು ಬಹುಚೋದ್ಯ ಲೋಲಲೋಚನಿಯೆ ॥ ೧ ॥

ಸುಮತೆ ಸಂಪಿಗೆಹುಳವು ಸಜ್ಜುಕದ ಕೆಲಬಲದಿ
ಭ್ರಮರಸಂದೋಹವತಿ ಬಲದಿ ತಿರುಗುವುದೆ
ಪ್ರಮದೆ ಗಿಳಿವಿಂಡುಗಳ ಪೊರೆಯಲ್ಲಿ ರಾಜಿಸುವ
ದಮಮ ಬಿಂಬಾಫಳವನಮರಿ ಮೃದುವಾಣಿ ॥ ೨ ॥

ವನಿತೆ ಮೃಗಪತಿಯೊಡನೆ ವಾರಣವ ಚರಿಸುವುದೆ
ವಿನುತೈನೆಲೆಯ ಚೆನ್ನವೀರೇಶನೊಲಿದು
ಅನುಕರಿಸಿ ಮಿಗೆ ನಿನ್ನ ಕಾಯ್ದನಲ್ಲದೆ ಜಗದೊ
ಳನಹಿತರ ಮಧ್ಯದೊಳುಳಿವುದಚ್ಚರಿಯೆ ॥ ೩ ॥

೫೦

ಜಾಣೆಯಾದೆ ವರಗೆ ಮೋಹಿನಿಯೆ
ಜಾಣೆಯಾದ ಪ್ರಿಯಗೆ ಮೋಹಿನಿಯೆ

ರಸಾಲಕಾಂಡ ಸನ್ನಿಹಿತ ಸುಖಕರಗೆ
ಪ್ರಿಯಗೆ ಮೋಹಿನಿಯೆ ॥ ಧ್ರು ॥

ಬಾಲಮರಾಳ ಸಮಾನಗಮನೆಯೆ
ಲೋಲಾಕ್ಷಿ ಪರಮ ಮನೋರಮನಿಗೆ
ಪ್ರಿಯಗೆ ಮೋಹಿನಿಯೆ ॥ ೧ ॥

ಕಲಿತಗಲಿತ ಸುಕುಟಿಲಕುಂತಲೆಯೆ
ಕಲಕಂಠಿ ಸತತಮತೀವ ಸುಂದರಗೆ
ಪ್ರಿಯಗೆ ಮೋಹಿನಿಯೆ ॥ ೨ ॥

ಸನ್ನುತ್ಯನಿಲಯ ಚೆನ್ನವೀರೇಂದ್ರ
ಪನ್ನಾಗ [ಧರ]ನಂ ಭಜಿಸುತ ಕೋವಿದಗೆ
ಪ್ರಿಯಗೆ ಮೋಹಿನಿಯೇ ॥ ೩ ॥

೫೧

ಬಿಡುವರೆ ರಮಣಿ ಕಾಂತನ ಸ್ನೇಹ
ಬಿಡುವರೆ ರಮಣಿ ನೀನಡಸಿ ಕೂಡಿದ ಬಳಿಕ
ಕಡುಚೆಲ್ವ ಪ್ರೌಢ ಜೊನ್ನೊಡಲಳಿಯನ ರೂಪ
ಗಡ ತರುಣಿ ತೋರ್ಮುಡಿಯೆ ಶೇಷನ ಪೆಡೆಯೆ
ಘನ ಮೃದು ಪೊಡೆಯ ಕೂರ್ಪನ ಮಡಿಯೆ
ಹಂಸನ ನಡಿಯೆ ಬೇಗನೆ ನಡಿಯೆ
ಸುಖಮಂ ಬಡಿಸುವಾತನ ॥ ಧ್ರು ॥

ಖಗಕಿನ್ನು ಫಲಿಸು ಸ್ತ್ರೀಗಾಧಾರ ಸುಗುಣನೆ ಲಲನೆ
ಜಗದೊಳು ಬುಧರು ಈ ಬಗೆಯೆಂದು ಪೇಳ್ವರೆ
ಮೃಗನೇತ್ರೆ ಈ ಮಾತು ನಗಿಯಲ್ಲ ನಿನ್ನಾಣೆ
ಬಗಸೆಗಂಗಳೆ ಪ್ರಾಣನಾಯಕ
ನಗಲುವಾಕೆ ಮಲ್ಲಿಗೆಯಬಾಣನ
ಬೇಗೆಯನಕಟಕಟೆಂತು ತಾಳುವೆ
ಸೊಗಸು ನಸುನಗೆಮೊಗದ ಪ್ರಿಯನ ॥ ೧ ॥

ನೆರೆವೆರೆಯ ನಾಳೆ ಮೂಡಲು ನಿನ್ನ ಶರೀರಕ್ಕೆ ಕಾಳೆ
ನೆರೆ ಪಾಡ್ಯದಿಂ ಶೀತಕರಸು ಪೆಚ್ಚುತ ಬಹನೆ
ಚರಣಾದಿ ಶಿರಸಾಂತ ವಿರಹ ಪುಟ್ಟುವುದಿನ್ನು
ಇರುಳೆಚರಿಪನ ನೆರಳು ಕೆಟ್ಟದು
ದುರುಳಕಾವನ ತರಳಪೂವಿನ
ಸರಳಬಾಧೆಗೆ ನೆರಳ್ವುದುಚಿತವೆ
ಮರುಳೆ ಬೇಗನೆ ತೆರಳೆ ವರನ ॥ ೨ ॥

ವಧು ಮಕುಟಮಣಿಯೆ ಶೋಭಿತ ಶಕಲ
ವಿಧುಪೋಲ್ವಫಣೆಯೆ ಅಧಿಕಮಾದ್ಯೆನೆಲೆಯ
ಸದನ ಚೆನ್ನವೀರನ ಪದಕಮಲಂ ಭಜಿಸಿ
ಪದುಳದೊಳಿರೆ ನಿತ್ಯಂ ಸುದತೆ ಸುಂದರೆ
ಪುದಿದ ಪ್ರಾಯಳೆ ಒದಗಿ ಪೋಗಿಲ್ಲೆ
ಚದುರೆ ಮೋಹದ ಹದನವರಿದುಪಚರಿಸಿ ಸುಖಜಲ
ನಿಧಿಯೊಳಾಳಲ್ಲೆ ಮಧುರವಾಣಿ ॥ ೩ ॥

## ೫೨

ಮದನರೂಪಿನ ಮುದ್ದು
ಚದುರನ್ನಾತಕೆ ಬಾರ
ಹೃದಯ ಚಂಚಲದಿ ನಿಲ್ಲದು ಹ್ಯಾಂಗೆ ಸಖಿಯೇ ॥ ಪ ॥

ಭ್ರಮೆಯಗೊಂಡೆನೆ ಎನ್ನ
ರಮಣನಗಲಿ ನಾನು
ಪ್ರಮದೆ ಬೇಗನೆ ಕರೆದುತಾರೆ ಸಖಿಯೇ
ಭ್ರಮರಕುಂತಳೆ ಹಸ್ತಿ
ಗಮನೆ ಕಟೀರಕಟಿ
ಅಮಿತಗುಣನು ಬರುವನೇಳೆ ನಾಯಕಿಯೇ ॥ ೧ ॥

ನಾಗರಿಕನಜಾತ
ನೀಗೆ ನಾ ಮನಸೋತೆ
ಹೇಗೆ ಮಾಡಲೆ ನಾನು ಈಗ ಸಖಿಯೇ

ಹೋಗಿಯಾತಗ ಪೇಳಿ
ಭೋಗಮಂಟಪಕ್ಕನು
ರಾಗದಿ ತಂದು ಕೂಡಿಸುವೆ ನಾಯಕಿಯೇ ॥ ೨ ॥

ಅಗರು ಕಸ್ತೂರಿ ಗಂಧ
ತೆಗೆದು ಬಟ್ಟಲೊಳಿಟ್ಟು
ಬಗೆದೇನೆ ತಾ ಬಂದನೆಂದು ಸಖಿಯೇ
ನಗ್ಗೆಮಾತಿಲಿಂದವನ
ಬಿಗುವು ತಿಳಿಸಿ ನಾನು
ಸೊಗಸುಗಾರನ ಕರೆದು ತರುವೆ ನಾಯಕಿಯೇ ॥ ೩ ॥

ಎಳೆಯ ಜವ್ವನದವಳು
ಗಳಿಗೆ ಸೈರಿಸಲಾರೆ
ಸುಳುಹುದೋರದೆ ಹೋದ ಸುಗುಣ ಏ ಸಖಿಯೇ
ಬೆಳದಿಂಗಳನೆ ಕಂಡು
ಗೆಳತಿ ಚಕೋರನಂ
ತೆಳಸಿ ಬರುವನೇ ತಾನಾಗಿ ನಾಯಕಿಯೇ ॥ ೪ ॥

ಕೋಗಿಲೆಗಳೇ ಭೃಂಗ
ರಾಗಗೆಯ್ಯಲು ಬಿದ್ದನೆ ನಾ ಭೂಮಿಗೆ ಏ ಸಖಿಯೇ
ಸೋಗೆಮುಡಿಯಳೆ ನಿನ್ನ
ಭೋಗಕ್ಕೆ ವಿಟ ತಾನೆ
ಸಾಗಿ ಬರುವನೇ ಚಿಂತೆ ಬೇಡೆ ನಾಯಕಿಯೇ ॥ ೫ ॥

ಕಳಸಕುಚಗಳಿಗೆ ನಖ
ಗಳನೊತ್ತಿ ಮಧುರಕೆಂ
ದೆಳೆದುಟಿ ಸವಿವಾತ ಬರನೇ ಏ ಸಖಿಯೇ
ಕಳಹಂಸಗಮನೆ ನಿ
ನ್ನೊಳಾದಾತಗೆ ಪೇಳಿ
ತಳುವದೆ ನಾ ಕರೆತರುವೆ ನಾಯಕಿಯೇ ॥ ೬ ॥

ಕುಟಿಲಕುಂತಳೆಯೆನ್ನ
ವಿಟನೊಳೊಂದಿಸ ನಾನು
ಸೆಟೆದವಳಲ್ಲ ನಿನ್ನಾಣೆಯೇ ಸಖಿಯೇ

ಕಟಿ ಸಣ್ಣ ಒಲಪಿನ
ಪಟುತರವೆಣ್ಣೆ ನಾ
ಸಟೆಯಲ್ಲೆ ತೋರ್ಪೆ ಸೈರಿಸೆ ನಾಯಕಿಯೇ ॥ ೭ ॥

ಅಂಗನಿಯೆ ಶಶಿಬಿಂಬ
ತಂಗಾಳಿ ತಂಪಿಗೆ
ತುಂಗಕುಚಗಳು ಬಿಗಿದವೆ ಏ ಸಖಿಯೇ
ಕಂಗಳ ಕರಚೆಲ್ವ
ನಂಗೀಕರಿಸಿ ನಾನು
ಸಂಗ ಬಲಿಸಿ ಕೂಡಿಸುವೆನೇ ನಾಯಕಿಯೇ ॥ ೮ ॥

ಇನಿಯಳೆ ಕೇಳೆನ್ನ
ಕೊನೆಗಣ್ಣು ಹಾರೋ ಸೂ
ಚನೆಯೇನು ಶುಭವೆ ಹೇಳಮ್ಮ ಏ ಸಖಿಯೇ
ಅನುಮಾನ ಬಿಡು ನಿನ್ನ
ಇನಿಯನಿಂದಿನ ರಾತ್ರಿ
ಗನುಕೂಲವಾಗೊ ಸೂಚನೆಯೆ ನಾಯಕಿಯೇ ॥ ೯ ॥

ಎಲ್ಲರಂತಹ ಪುರುಷ
ನಲ್ಲೆ ಆತನ ಮನಸು
ಎಲ್ಲಿ ಕೆಟ್ಟಿತೊ ತಿಳಿಯದೆ ಏ ಸಖಿಯೇ
ನಿಲ್ಲು ನಿಲ್ಲು ನಾಥ
ನಲ್ಲಿಗೇ ನಾ ಪೋಗಿ
ಭುಲ್ಲೆಸಿಲ್ಲಿಗೆ ಕರೆತರುವೆ ನಾಯಕಿಯೇ ॥ ೧೦ ॥

ಪಲ್ಲವಾಧರೆ ಕಬ್ಬು
ಬಿಲ್ಲನೆಚ್ಚುವ ಶರಕೆ
ನಿಲ್ಲಲಾರೆನೆ ಬೇಗೆ ಪೋಗೆ ಏ ಸಖಿಯೇ
ಲಲ್ಲೆವಾತಿಲಿ ನಿನ್ನ
ನಲ್ಲನ ಭುಲ್ಕೈಸಿ
ಇಲ್ಲಿಗೆ ನಾ ಕರೆತರುವೆ ನಾಯಕಿಯೇ ॥ ೧೧ ॥

ದೂತೆ ನಾನಾಗಿ ಮನ
ಸೋತೆನಲ್ಲದೆ ಈಗ
ಲಾತನಿಂದಿದನಾಗಲಿಲ್ಲೆ ಏ ಸಖಿಯೇ

ಜಾತೆ ನಾಯಕಿ ನಿನ್ನೊ
ಳ್ಳೋತು ಕೂಡಿಸುವೆನೆ
ಭೀತಿಗೊಳ್ಳಲಿ ಬೇಡೆ ಸುಗುಣೆ ನಾಯಕಿಯೇ || ೧೨ ||

ಮಿಕ್ಕ ಮಾನಿನಿಯರಿಗೆ
ಸಿಕ್ಕುವಾತನು ಅಲ್ಲೆ
ದಕ್ಕಿದವಳ ಪುಣ್ಯಕೆಣೆಯೇ ಏ ಸಖಿಯೇ
ಚಿಕ್ಕ ಪ್ರಾಯಳೆ ನಿನ್ನ
ತಕ್ಕ ಪ್ರಿಯನ ತಂದು
ತೆಕ್ಕೆಯೊಳಗೆ ಕೂಡಿಸುವೆನೆ ನಾಯಕಿಯೇ || ೧೩ ||

ಮದನಸನ್ನಿಭ ಕುಂದ
ರದನ ಕೋವಿದನಿಗೆ
ಬದಲುಭವವು ಮಾಡಲಿಲ್ಲೆಯೇ ಸಖಿಯೇ
ಒದಗಿ ಕಾಂತನ ನಿನ್ನ
ಸದನಕ್ಕೆ ಕರೆತಂದು
ಮುದದಿ ಕೂಡಿಸುವೆ ಲಲಿತಾಂಗಿ ನಾಯಕಿಯೇ || ೧೪ ||

ಪೊಡವಿಗ್ಯೆನೆಲೆವಾಸ
ಒಡೆಯ ಚೆನ್ನವೀರೇಶ
ಒಡಗೂಡಿ ಒಲಿಯುದಹಾಂಗ್ಹಾನೆ ಏ ಸಖಿಯೇ
ಕುಡುತೆಗಂಗಳೇ ಭಕ್ತ
ರೊಡಲೊಳು ತುಂಬಿಪನೆ
ಕಡಿಲಿ ನಿಂತಿಪನೆ ಜಡಮನಕೆ ನಾಯಕಿಯೇ || ೧೫ ||

೫೩

ಒಲ್ಲನೆಂಬುವರೆ ಏ ವನಿತೆ ನೀ
ಒಲ್ಲನೆಂಬುವರೇಸೆ ವಲ್ಲಭನೊಳು ನೀರೆ
ಸಲ್ಲಲಿತಾಂಗೆ ಇಮು ಸಲ್ಲದೆ ಕಾಂತೆ || ಪ ||

ಎಳೆಜವ್ವನದೊಳು ನೊಯ್ಸದೆ ನಿನ್ನ
ನುಳುಹಿ ಕಾಯ್ವನೊಳು ಮುಳಿಸು ಸಾಕಲಸದೆ

ಸೇದಪ್ಪಿ ಸೆಳೆಮಂಚದೊಳು ಕೇಳಿರಸದೊಳು
ಮುಳುಗಿಸೆ ಜಲಜಾಕ್ಷಿ ॥ ೧ ॥

ದಶಾವಸ್ಥೆ ಭರಕೆ ಏ ತರುಣಿ ನೀ
ಬಸವಳಿಮುದಕೆ ರಸಸುಖಕ್ಕೊದಗಿ ನಿ
ನ್ನಸುವ ರಕ್ಷಿಸಿದಂಥ ರಸಿಕನೊಳು
ಎರವೇನೆ ಕುಸುಮಗಂಧೆ ॥ ೨ ॥

ತನುವಿಲ್ಲದವನ ತಂತ್ರದಿ ನೀನು
ಬಿನದಿಸೆ ಲಲನಾ ಘನತರ್ಕೈನೆಲೆಯ ನಿವಾ
ಸನ ಚೆನ್ನವೀರೇಶನನುಕರಿಸಿದ ಮೇಲೆ
ಮುನಿವುದಲ್ಲವೇ ಪ್ರಮದೆ ॥ ೩ ॥

೫೪

ಭಾವಕಿಯೆ ನಿನ್ನ ಮಧ್ಯ ಬಡವಾದುವೇಕೆ
ಆವಗಂ ನೋಡಿದಡೆ ಅತಿಕೃಶವನಾಂತಿಹುದೊ ॥ ಪ ॥

ಮುನಿಗಳ ಸುವ್ರತಕೆ ಸಜ್ಜನರ ಸಾಧನಕೆ ತಾ
ನನಹಿತದಿ ಕಾಡಿ ದುರ್ಜನನೆನಿಸಿ ಚರಿಪ
ಮನಸಿಜನ ಮಂದಿರವು ತನ್ನ ಪೊರೆಯೊಳಿಹುದೆಂದು
ಘನಚಿಂತೆಯಿಂದೆ ಬಡವಾಯ್ತೇನೆ ಸಖಿಯೇ ॥ ೧ ॥

ವಿಷಧರನ ಸಾಕಾರದಂತೆ ಬಡಬಾಸೆ ರಾ
ಜಿಸುವ ನಿಜರಂಧ್ರದಿಂ ಪಡೆದು ಯುಗಕುಚದ್ವಗಕೆ
ಅಸಮನಯನ ನೋಡುವ ನಾಭಿಯೆ ತನ್ನೊಳಿಹುದೆಂದು
ಕೃಶವಾದುದೇನೆ ಪೇಳು ಮುದದಳನಯನೇ ॥ ೨ ॥

ಒಡಲೆರ್ದೆಯು ಕೊರಳು ಪೊಂಗೊಡಮೊಲೆಯು ಮೊಗ ತೋರ
ಮುಡಿಯು ಮೊದಲಾದ ಭಾರವ ಹೊತ್ತು ಬಳಲಿ
ನಡೆಯಲಾರದೆ ಬಳುಕುತಿರಲನ್ಯರೊಳಗೆಣಿಸಿ
ನುಡಿದುದಕೆ ಕಡುನೊಂದು ಬಡವಾಯ್ತೆ ಪ್ರಮದೇ ॥ ೩ ॥

ಮಕರಕೇತನ ರಣದ ಮುಂಭಾಗದೊಳಿಹ
ನಖದಾಂಕುಶದ ಹತಿಗೆ ನಡುಗದೆ ಬೆಳೆದು
ಪ್ರಕಟಿಸುವ ಶ್ರೋಣಿಕುಚಗಳ ಧೈರ್ಯಮಂ ಕಂಡು
ವಿಕಳತೆಯೊಳೀ ಮಧ್ಯ ಬಡವಾಯಿತೇನೇ ॥ ೪ ॥

ಕರಿವೈರಿ ಕಟಿಗೆ ಸಮವೆಂದು ಕವಿಗಳು ನುಡಿಯೆ
ಕೊರಗಿ ಕೃಶವಾಯ್ತು ಹರಿಕೊಲುವುದೆಂದಳುಕಿ
ಪರಿಶೋಭಿಪ್ಪೆಸೆಲೆಯಪತಿ ಚೆನ್ನವೀರನ
ಶರಭನಾಮವ ಜಪಿಸುತಿರು ನಿನಗೆ ಭಯವಿಲ್ಲೇ ॥ ೫ ॥

೫೫

ಇಂಥ ಕಪಟವಿನ್ನಿದೇತಕೆ ಪ್ರಿಯೆ
ಕಾಂತನೊಡನೆ ರತಿಕಾಂತನಾಗಮದಿ ಪ್ರಿಯೆ ॥ ಧ್ರು ॥

ಗಾಢಾಲಿಂಗನದೊಳು ಗದರಿದೇನೆ ಪ್ರಿಯೆ
ಮೂಢಮುಗ್ಧೆಯಳಂತೆ ಮುನಿವರೇನೆ ಪ್ರಿಯೆ
ಈಡಾಗಿರ್ದಾತನೊಳು ವಿರಸವೇನೆ ಪ್ರಿಯೆ
ಕೂಡಿದ ಮೇಲೆ ಮತ್ತೆ ಕೊರಚಾಡುವರೇನೆ ಪ್ರಿಯೆ ॥ ೧ ॥

ಮುಖಸಂಯೋಗದೊಳು ನೀ ಮುಸುಕಿಡುವರೇ ಪ್ರಿಯೆ
ನಖಕ್ಷತದೊಳು ಬಹು ನಿಟ್ಟಿಸುವರೇ ಪ್ರಿಯೆ
ಸುಖರತಿಯೊಳು ವಂಚಿಸುತಮಿರುವರೇ ಪ್ರಿಯೆ
ವಿಕಳಾವಸ್ಥೆಯೊಳಿಂತು ವಿರಚಿಸುವರೇ ಪ್ರಿಯೆ ॥ ೨ ॥

ಕುಲಸತಿಯರಿಗಿದು ಕೊರತೆ ನೋಡೆ ಪ್ರಿಯೆ
ಚಲಿಸದೆ ನಿನ್ನೊಳಿರ್ಪ ಛಲವು ಬೇಡೆ ಪ್ರಿಯೆ
ಅಲಸದೆ ಪೋಗಿ ಭಾವಮರೆದುವಾಡೆ ಪ್ರಿಯೆ
ವಿಲಸದ್ವೈನಿಲಯ ಚೆನ್ನವೀರನ ಕೂಡೆ ಪ್ರಿಯೆ ॥ ೩ ॥

ಮಾತನಾಡೆ ಮಾರನ ಕೈಬೊಂಬೆ
ಮಾತನಾಡೆ ಮಾಣಿಕದ ಬೊಂಬೆ
ಪ್ರೀತಿ ಮಾಡೆ ಪ್ರಿಯನ ಸಂರಂಭೆ ॥ ಪ ॥

ಚತುರಮತಿಯಳೆ ಚಪಲಗಾತ್ರಿಯಳೆ
ನೂತನ ಸೈಕತನಿತಂಬೆ ॥ ೧ ॥

ಕಮಲಪಯೋಧರೆ ಕಠಿಣಪಯೋಧರೆ
ರಮಣಿ ರಮ್ಯಗುಣ ಕದಂಬೆ ॥ ೨ ॥

ಚಾರ್ಯನಿಲಯನ ಚೆನ್ನವೀರಾರ್ಯನ
ಸೇರಿ ಕ್ರೀಡಿಸಿ ನಂಬೆ ॥ ೩ ॥



೫೭೭

ಒಮ್ಮನದಿ ಮಧ್ಯವರ್ಣನ ಭಜಿಸೆ ಸಖಿಯೆ
ಸುಮ್ಮನಿರದಿರು ನೀನು ಸೋಮನಿಭಮುಖಿಯೆ ॥ ಧ್ರು ॥

ಕಣ್ಣಿಂದ ಕೇಳವನ ಪೆಸರವನ ಕೊಂದವನ
ಕಣ್ಣು ಜಗಕಾವವನ ಕಾಯಸಂಭವನ
ಪೆಣ್ಣು ಸೆರೆಗೊಟ್ಟವನ ತನ್ನ ಮುಖಕೊಯ್ದವನ
ತಣ್ಣಗಿರುವನ ಪಗೆಯ ಯೂಪನ ಹರನ ॥ ೧ ॥

ಕಾಲಿಲ್ಲದವನ ಸಂಗತಿಲಿ ನಡೆತರುವವನ
ಮೇಲಾದ ಬಲದಿ ಮೂರನೆ ಅಂಗದ
ಭೂಲೋಕವನಾಳುತಿಹ ಭೂಪತಿಯ ಪೆಸರಿನೊಳು
ಲೋಲ ಮುನಿಜನರು ಬಯಸುವ ಪದಪನರಸಿ ॥ ೨ ॥

ಚಾಪಸಿಂಜಿನಿಕೇತು ಸೂತಶರಮಧ್ಯದೊಳು
ವ್ಯಾಪಿಸಿರ್ಪನ್ನದ ನಾಮದಿಂದಸವ
ದೀಪಿತ್ರೈ... ಪುರಧೀಶ ಭಕ್ತರ ಪ್ರಿಯನ
ಏ ಪಂಕಜಾಕ್ಷಿ ಎಡೆಬಿಡದೆ ನೀ ಭಜಿಸೆ ॥ ೩ ॥

೫೮

ಕಾಂತನಗಲಿದನಲ್ಲೆ ವಿರಹವೊಳಿವ
ಳೆಂತು ಜೀವಿಪಳಿಲ್ಲೆ ಪರಗ್ರಾಮದೊಳಗವ
ನಿಂತನೇತಕೊ ಅಲ್ಲೆ ಇದು ತಿಳಿಯದಲ್ಲೆ
ಸ್ವಾಂತಭವನ ಜ್ವರಮುದಿಸೆ ನಿಶಾ
ಕಾಂತಮುಖಿ ಬಹು ಬಸವಳಿದು ಸೀ
ಮಂತಿನಿಯು ತಾ ಹಾಹಾಯೆನುತ ಲ
ತಾಂತಶರಕೆಡೆಯಾದಳಲ್ಲೆ ॥ ಧ್ರು ॥

ಕಾಮಿನಿಯು ಕಾತರಕೆ ಕಡುಪವ್ವಳಿಸುತ ಸು
ಶಾಮತಾಪದ ಭರಕೆ ಜೊಂಗುಳಿಗೊಳಲು ವಿ
ಶ್ರಾಮವಾಗುವುದಕೆ ಕೆಳದಿಯರು ವನಕೆ ತಾಮರಸದೃಕ್
ಸಾಮಜಗತಿ ಸೋಮಮುಖಿ ಸದ್ರೋಮಶ್ರೇಣಿಯು
ರಾಮಣೀಯಕ ಬಿಂಬೋಷ್ಠ ಶುಕನುಡಿ
ಭಾಮಿನಿಯ ಕೊಂಡೊಯ್ದು ಸಮಯದಿ
ಕಾಮಸಖಿ ವರ್ಧಿಸಿದ ಕಿಂಶುಕ
ಮಾಮರಂ ಕೇತಕಿಯ ವನದಾ
ರಾಮದೊಳು ಗಜ ಕೀರ ಘಣಿಗಳ
ಸ್ತೋಮಮಿಹುದೆಂದವಳ ನಿಲಿಸದೆ ॥ ೧ ॥

ವಿದಳಿತಂಬುಜನನ ಅರೆಮುಗಿದು ಪರಿತಾ
ಪದ ಘನತೆಯಿಂ ಶಯನ ತೊಲತೊಲಗಿ ಪೊರಳುವ
ಸುವತಿಗುಪಚಾರದಮನ ಆರ್ಯವುತಿರಲು
ಬೆದರದಿರೆ ಕುಳಿತವಳು ವದನ ಲೋಚನ ವಕ್ರಕಚ ಭ್ರೂ
ಮಧುರವಚ ಕರತಳಕೆ ಮುಗ್ಧೆಯು
ಹೃದಯದೊಳ್ಮಿಗೆ ಕರಕರಿಸುತಲಿ
ವಿಧುಕುಮುದಶರ ಮಧುಪ
ಹೆವೆ ಮೇಣ್ಮಧುರವಿಲ್ಗಳೆ ಮಿದುತಳಿರ್ಸಹ
ಮದನ ತಾನಟ್ಟಿವನೆನುತಲವ
ಳೊದರಿ ಮರೆದೊರಗಿದಳು ಬಾಲೆ ॥ ೨ ॥

ಶುಕ ಪಿಕವು ಸ್ವರಮಾಡೆ ರಾತ್ರಿಯೊಳು ಪಾವಕ
ಸಖನು ತಂಪಿಲಿತೀಡೆ ಶೋಭಿತಲಿಂದ್ರ

ಕಕುಭದೊಳ್ ಶಶಿಮೂಡೆ ಇವಳಂಗ ಬಾಡೆ
ವಿಕಳದಿಂ ತನ್ನ ಕರವಾಯಸ
ನಿಕರ ಫಣಿ ರಾಹುವಿಗೆ ಮುನಿದು ಸು
ಮುಖಿಯು ಪಳಿವಳು ದಶಾವಸ್ಥೆಯೊ
ಳಕಟಕಟವೊಂದುಳಿಯಿತಲ್ಲೆ ಸುಖಕರ್ಯನಿಲಯಧಾಮನೋ
ತ್ಸುಕ ಗುರು ಚೆನ್ನವೀರೇಂದ್ರಸು
ಪ್ರಕಟಿಸುವ ಪದಕಂಜರಸ ಭಾ
ವಕಿಯ ಚೇತಳಿಗೆರೆಯಲಿಲ್ಲೆ ॥ ೩ ॥

೫೯

ಮೂಡಲಾಗದ ಮುನ್ನ ಬಂದೆ
ಮುನಿಸು ನಿನ್ನದೇನೆ ಬಾಲೆ
ಕೂಡಲಿಲ್ಲವೋ ಕೂಡಿದ್ಯೋ
ಕುಟಿಲಭಾವ ತಿಳಿಯದ್ದೇಳೆ ॥ ಪ ॥

ಗಲ್ಲದ ಮಕರಪತ್ರ
ಗಾಯವಾದುದಿಲ್ಲೆ
ಮುಡಿಯ ಮಲ್ಲಿಗೆಯ ಮಾಲೆ
ಬಾಡಿ ಮುಖವು ಕುಂದಲಿಲ್ಲೆ
ಪೊಳೆವ ಪಲ್ಲವಾಧರ ಬಿರಿದು
ತಿಲಕ ಪತನವಾಗಲಿಲ್ಲೆ ಬಾಲೆ ॥ ೧ ॥

ಮೊಳೆಜವ್ವನೆಯೆ ಸ್ತನಗಳಲ್ಲಿ
ತಳೆದ ಚಂದನುದುರಲಿಲ್ಲೆ
ಲಲಿತ ನೇತ್ರಾಂಜನಮಾನಂದ
ಜಲದಿ ತೊಳೆದು ಪೋಪುದಿಲ್ಲೆ
ಅಲಿಕದೊಳ್ಕೊಂಕಿರುವಕುರುಳ
ವಲರದಿಹವಿದ್ದಲ್ಲೆ ಬಾಲೆ ॥ ೨ ॥

ಕುಂಭಿನಿಯೊಳೈನೆಲೆಯಾಲಯ
ಶಂಭುಗುರು ಚೆನ್ನವೀರೇಶ

ನೆಂಬ ಸೋಮನ ಬೆಳದಿಂಗಳಿಗೆ
ರಂಭೆ ಪೃತ್ಕುಮುದವಲರಲಿಲ್ಲೆ
ಅಂಬುಜಾಕ್ಷೇಂದ್ರಿಯ ಚಕೋರ
ಬೆಂಬಿಡದೆ ಕ್ರೀಡಿಸಲಿಲ್ಲೇನೆ ॥ ೩ ॥

೬೦

ಸೋಮವದನೆ ನೋಡೆ ದಿವ್ಯಸುರುಚಿರಾಂಗನೆ
ಪ್ರೇಮಕಲಪದಲಿ ನುಡಿದ ಪ್ರೌಢತನವನು ॥ ಧ್ರು ॥

ನುತಶುಭಾಂಗ ಸರಸಸುಸ್ಮಿತಮುಖಪ್ರವೀಣ ಪ್ರಿಯನ
ಸತಿ ಮನೋಜನಾಗಮದಲಿ ನೋಳ್ಪ ಸಮಯದಿ
ಶತದಳೇಷ್ಟನಾತ್ಮಭವನ ಹಿತದಿ ಕಾಮಿಸಿರ್ಪಬಲೆಯ
ಪಿತನ ಪಿರಿಯಳಿಯನನುಜನಪಿತನವೊಲಿದು ನೆನೆದಳಂತೆ ॥ ೧ ॥

ಸಾರಸಾಕ್ಷಿ ಕೀರವಾಣಿ ಮಾರರತಿವಿಲಾಸದಲಿ
ಸಾರಪ್ರಿಯನಂಗವಪ್ಪಿಕೊಂಬ ಸಮಯದಿ
ಸಾರಸಾರಿತಾತನ ತನಯಾರಮಣಸುತನಸತಿಕು
ಮಾರನೊಡನೆ ಕೂಡಿ ಮೆರೆವ ನಾರಿಪಿತನ ನೆನೆದಳಂತೆ ॥ ೨ ॥

ಸದಮಲ್ಯನಿಲಯಪುರಿಯಸದನ ಚೆನ್ನವೀರಣಾರ್ಯ
ನಧರಪಿಡಿದು ಸುದತಿ ಮುದ್ದುಗೊಡುವ ಸಮಯದಿ
ಮುದಿರವೈರಿಯಾತ್ಮಜಾತನಧಿಪನಂಗನಯ ಜನನಿಯ
ಮುದದಿ ಶಿರದಿ ಧರಿಸಿದವನ ಚಮರೆ ನಲಿದು ನೆನೆದಳಂತೆ ॥ ೩ ॥

೬೧

ಬಿಡುಬೇಡ ಪಿಚಕಾರಿ ಪ್ರಿಯ
ತುಡುಕಿ ಓಕುಳಿಯಿಂದ ತೊಯ್ಸಿದಿ ಮೈಯ ॥ ಪ ॥

ಕಳಸಕುಚಕೆ ಜೀರ್ಕೊಳವಿಲೀವ ಚಮರ
ಬಳಲಿ ಕಣ್ಣಿಗೆ ಬವಳಿಬಂದಿತೆನಗೆ ॥ ೧ ॥

ಮಲಯಜತೈಲ ಗುಲಾಲ ಕಸ್ತೂರಿ ಪರಿ
ಮಳ ಪುಡಿಯೊಳಗೆ ಮೂರ್ಛೆಯಾದವಳಿಗೆ ॥ ೨ ॥

ಬರಸೆಳೆದಪ್ಪಿ ಬಾಯ್ದೆರೆದು ಚುಂಬಿಸಿಯೆನ್ನ
ಮರ್ಧುಳುಗೊಳಿಸಿ ಹೀಗೆ ಮರಳಿ ಕಾಡುವರೆ ॥ ೩ ॥

ಒಪ್ಪವಜವ್ವನ ತಪ್ಪದೆ ನಿನಗೆ ನಾ
ಕಪ್ಪಗೊಡುವೆನು ಕಂದರ್ಪ ಸನ್ನಿಭನೆ ॥ ೪ ॥

ಸುಲಲಿತ್ಯನೆಲೆನಿಲಯ ಚೆನ್ನವೀರೇಂದ್ರ
ಸಲೆ ನೋಡೆ ಸಾಕು ಓಕುಳಿ ಪೊಯ್ಯುವೆನಗೆ ॥ ೫ ॥

೬೨

ಭಾವಸಂತರ್ಪಣ ಬಾಲೆ ಬಂದಿತು
ಭಾವೆ ಚೂತವನವು ಕೊನರಿ ನಿಂದಿತು ॥ ಪ ॥

ಮಂಜು ಮಲ್ಲಿಕಾದಿ ಕುಸುಮ
ಮಂಜರಿಗಳ ಭಾರದಿಂದೆ
ಕುಂಜದೊಳಗೆ ನಿಬಿಡಛಾಯವಾಯಿತು ॥ ೧ ॥

ಗೆಳೆಯ ಮದನಗೆಂದು ಚೂತ
ತಳಿರು ಮಂಟಪಗಳು ರಚಿಸಿ
ನಳಿನಶರನ ದಳವು ಬಂದು ತೀವಿತು ॥ ೨ ॥

ಸ್ಥಿರಿಳೆ ಐನಲೇಶ ಚೆನ್ನ
ವೀರಣಾರ್ಯನ ಭಜಿಸುವ
ಸಾರಮತಿಯ ಜನಕೆ ಸೌಖ್ಯವಾಯಿತು ॥ ೩ ॥

೬೩

ಬಂದಿದೆ ಸಖಿಯೆ ಬಸಂತನ ಹಬ್ಬ
ಸುಂದರಪ್ರಿಯನು ಬಾರದೆ ಹೋದನೆ ॥ ಪ ॥

ಮಧುಪ್ರಿಯ ಮಾವಿನವನ ಕೊನರಿಸಿದ
ಮದನಮಾರ್ಬಲವು ಕ್ರೀಡಿಸುವದ ॥ ೧ ॥

ಕೆಳದೇರು ತಮತಮ ಪ್ರಿಯತಮರೊಡನೆ
ಬಳಸಿ ಜೀಕರ್ೊಳವಿಲೋಕುಳಿ ಕೆಯ್ವರೆ ॥ ೨ ॥

ಮಲಯಜ ಮೃಗಮದ ಘನಸಾರ ಕುಂಕುಮ
ಕಲಸಿಟ್ಟೆ ಯಕ್ಷಕರ್ದಮ ಕಾಂತಗೆ ॥ ೩ ॥

ತನುವೆಂಬ ಚೂತನಂದನ ಪಲ್ಲವಿಸಿತೆ
ವಿನಯತಾನಕಟ ನಿಂತನೆ ಬಾರದೆ ॥ ೪ ॥

ಅನುಪಮ್ಯನೆಲೆ ಚೆನ್ನವೀರತಾರೇಶ
ಮನಚಕೋರಕ ಪ್ರೀತಿ ಬಡಿಸಲಿಲ್ಲೆ ॥ ೫ ॥

೬೪

ಬಂತು ಬಸಂತವಿಲಾಸ ಮನೋರಮ
ನಿಂತನಲ್ಲೆ ಸಖಿ ಬಾರದೆ ॥ ಧ್ರು ॥

ಚೂತಜಾತಿ ವಿಚಕಿಲ ಬಕುಳೋತ್ಕರ
ಪೂತಪುಷ್ಪಮಂಜರಿಯ ಸಹ ॥ ೧ ॥

ಮಲಯಗಿರಿಯ ಪರಿಮಳ ಪೊತ್ತನಿಲನ
ಬಲದಿ ಝೋಂಪಿಸುತ ಮೆಲ್ಲನೆ ॥ ೨ ॥

ಭಾಸುರ್ಯನೆಲೆಯವಾಸ ಚೆನ್ನವೀ
ರೇಶ ದಯಾನಿಧಿ ತಡದನೆ ॥ ೩ ॥

೬೫

ದರಹಸಿತಾನನೆ ಬಾರೆ
ಸುಂದರನ ಸನ್ನಿಧಿಗೆ

ದರಹಸಿತಾನನೆ ದರದೃಢೋಪಮಾನೆ
ದರಗಲಭಾಮಿನೆ ಬಾರೆ ಸುಂದರನ ಸನ್ನಿಧಿಗೆ ॥ ಪ್ರ ॥

ಬಂಧುರ ರಸನಿಯೆ
ಕುಂದದ ದಶನಿಯೆ
ಮಂದರ ಗಮನಿಯೆ
ಸುಂದರನ ಸನ್ನಿಧಿಗೆ ॥ ೧ ॥

ಕಲಶಪಯೋಧರೆ
ನಲಿನ ಪಯೋಧರೆ
ಕಲಕೀರವಾಣಿಯೆ ಬಾರೆ
ಸುಂದರನ ಸನ್ನಿಧಿಗೆ ॥ ೨ ॥

ವಿತತೈನಿಲಯನೆ
ಪತಿ ಚೆನ್ನವೀರನೆ
ಗತಿಯೊಂದೊಲಿಸಲಿಕ್ಕೆ ಬಾರೆ
ಸುಂದರನ ಸನ್ನಿಧಿಗೆ ॥ ೩ ॥

೬೬

ಕೂಡಲಿಲ್ಲವೊ ಪ್ರಿಯೆ ಕೋವಿದನೊಡನೆ
ಮೂಡಲ್ಪದೊಳು ಬಂದಿಯೇ ॥ ಪ್ರ ॥

ವದನದಿ ಒನಪಿಲ್ಲ ಅಧರವು ಬಿರಿಲಿಲ್ಲ
ಕದಪಿಗೆ ಪಲ್ಗಾಯ ಪುದಿದೊಂದನಿಲ್ಲ ॥ ೧ ॥

ಕಚಭರ ಸಡಲಿಲ್ಲ ಕುಚಗಳಿಗುಗುರಿಲ್ಲ
ರುಚಿರಾಕ್ಷಿಗೆ ಕೆಂಪರಚನವೇರಿಲ್ಲ ॥ ೨ ॥

ಸಾರೈನೆಲೆ ಚೆನ್ನವೀರಾಮೃತಕರನ
ನೀರೆ ನಿನ್ನ ಮನಸ್ಯುಕೋರ ಕ್ರೀಡೆಯೊಳು ॥ ೩ ॥

೬೭

ಬಂದಳಲ್ಲೆ ಭಾವಕಿಯಳೆ
ಬಂದಳು ಸಂಕೇತಮಂದಿರ
ದಿಂದ ಪೂರ್ಣೇಂದುನಿಭಾನನೆ
ಸುಂದರನೊಳು ಕೂಡಿ ॥ ಪ ॥

ದಶನ ದೀಧಿತಿಯಿಂದ ಪಸುನಗುತಲಿ ತನ್ನ
ಸೊಸಲ ಕುಂತಲಗಳು ತಿದ್ದುತಲಿ
ಎಸವ ಮುಖದ ಕಾಂತಿರಸ ತುಳುಕುತಲುಟ್ಟ
ವಸನದ ತುದಿ ತುಟಿಯೊಳಿಡುತಲಿ
ಎಸಳುಗಣ್ಣವೆಗಳು ನಸುದೆರವುತ ಬಾಲೆ
ಬಿಸವಳಿದಂಗ ಝೂೞಿಪಿಸುತಲಿ
ಮಿಸುಪ ಬೈತಲಿಗಿರ್ದ ಕುಸುಮಗಳಸಲುದುರಿ
ಒಸರ್ವ ಬೆಮರಿಂದೆ ಶೋಭಿಸುತ ಮಂಜುಲಗಾತ್ರೆ ॥ ೧ ॥

ಅಧರದೊಳೂರಿರ್ದ ರದನಗಾಯವು ತನ್ನ
ಪದನ ಬಾಗಿಸಿ ನೋಡಿಕೊಳುತಲಿ
ಎದೆಯೊಳೊತ್ತಿರುವ ನಖದಗಾಯ ಸೋವಿಗೆ
ಬೆದುರಗೆ ಮನದೊಳು ಬಯ್ಯುತಲಿ
ಮದನಾಗಮದಿ ಪ್ರೇಮಕದನದೊಳತಿ ಜಗು
ಳಿದರ್ಸೀ ಪಿಕಟಿಗೆ ಸೈರಿಸುತಲಿ
ಬೆದರಿದರಳೆಯಂತೆ ಸುದತೆ ನೋಡುತ ವಿಟರ
ಹೃದಯ ಝಲ್ಲೆಂಬಂತೆ ವಿದಳಿತಾಂಬುಜ ಪಾಣಿ ॥ ೨ ॥

ಮಕರ ಪತ್ರಗಳ್ಳುಕರದಿಂದಡಹುತ್ತ
ಚಿಕುರ ನುಣ್ಣೆಸಿಗಟ್ಟಿ ತಲೆವಾಗಿ
ಕುಚ ಸನ್ನಿಭ ಕುಚ ಚೂಚುಕದ ಮೇಲೆಸವ
ಕಂಚುಕದ ಗಂಟಿಕ್ಕಿ ಲಜ್ಜಿತಳಾಗಿ
ಪ್ರಕಟಿಸಿ ಪೊಳೆವ ಮೌಕ್ತಿಕಮಾಲೆ ಸರಿಸುತ್ತ
ಮಕರಂಕನಿಂದ ಪೂಜಿತಳಾಗಿ
ಸುಖಕರ್ಸೆಲಪುರಿಯನಿಕಾಯ್ಯ ಚೆನ್ನವೀರೇಂದ್ರ
ನಖಿಲ ಕ್ರೀಡೆಯೊಳೊಲಿದು ನಿಕಟದಿಂ ರತಿಯಂತೆ ॥ ೩ ॥

೭೮

ಪೋಲಿಯಾಡುವ ಬಾರೆ
ಸುಂದರಾಂಗನ ಕೂಡ ಒಯ್ಯಾರೆ ॥ ಪ ॥

ಹೇಮ ಸುರತ್ನ ಖಚಿತ ಪಿಚಕಾರಿ
ಸಾಮಜಯಾನೆ ಸತ್ವರದಿ ನೀ ತಾರೆ ॥ ೧ ॥

ಕಾಶ್ಮೀರಚಂದನ ಕಲಸಿದೋಕುಳಿಯ
ಸುಸ್ಮೇರಮುಖಿನೊಳೆಚ್ಚಾಡುವ ನೀರೆ ॥ ೨ ॥

ಕಂಕಣ ಕರದ ಸೌರಭ ಸಮ್ಮಿಳಿತ
ಕಂಕಣದೊಳು ಮುಳುಗಿಸುವ ಶೃಂಗಾರ ॥ ೩ ॥

ಕೊನೆಯನೋಟೆಂಬ ಕೂರ್ಗಣೆಯಿಂದ ಪ್ರಿಯನ
ಮನವಪಹರಿಸಿ ಮೆಚ್ಚಿಸುವ ಸುಸಾರೆ ॥ ೪ ॥

ರುಚಿರೈನೆಲೆ ಚೆನ್ನವೀರೇಶನೊಲಿಸಿ
ಉಚಿತಾಮೃತ ಸುಖ ಸೇರೆ ಪಿಚಾರೆ ॥ ೫ ॥

೭೯

ನೋಡುವ ಬಾರೆ ಏ ಗೆಳದಿ
ಶಿವನ ನೋಡುವ ಬಾರೆ ॥ ಪ ॥

ನೋಡುವ ಬಾರೆ ನಮ್ಮ ನೋಟಗಳ ಪಬ್ಬವಿಂದು
ಗಾಡದಿಂಪುರವ ಪೊಕ್ಕು ಗಮಕಿಲಿ ಬರುವ ಶಿವನ ॥ ಅನುಪಲ್ಲ ॥

ಸಿಂಘಬಲ್ಲಾಳನಾಳ್ವ ಸ್ತ್ರೀಯಳ ಜೇಡುವುದಕೆ
ಸುಂದರರೂಪ ತಾಳಿ ಸೊಗಸಿಲಿ ಬರುವ ಶಿವನ ॥ ೧ ॥

ಕೋಟಿ ಮದನರ ಹಳಿವ ಕೊನಬುಗಾರ ತಾನಾಗಿ
ಮಿಟು ಜವ್ವನಿಯ ಬಹಳ ಮಿನುಗುತ ಬರುವ ಮೃಡನ ॥ ೨ ॥

ಹಾರಹೈಗಲಹಾಕಿ ಹಸ್ತಕಡಗಗಳಿಟ್ಟು
ನೀರೆ ಚಿಮ್ಮುರಿಯ ಸುತ್ತಿ ಒಲಪಿಲಿ ಬರುವ ಶಿವನ ॥ ೩ ॥

ಪೂರ್ವದೊಳು ಮಾಡಿದ ಪುಣ್ಯದ ಫಲಗಳಿಂದೆ
ಪಾರ್ವತಿವರನು ನಮ್ಮ ಪಟ್ಟಣದೊಳಗೆ ಬರುವ ಶಿವನ ॥ ೪ ॥

ಗುರುತರ್ಕೈನಿಲಯಪುರಿಯ ಗುರು ಚೆನ್ನವೀರೇಶ್ವರನು
ವರ ಸಿಂಧುಕಟಕದೊಲು ಒಲವುತೆ ಬರುವ ಶಿವನ ॥ ೫ ॥

೭೦

ಬಂದರೆ ನೀ ಬಾರೆ ಬಾ ಆ ನಾಥನಲ್ಲಿಗೆ ನೀ
ಬಂದರೆ ಬಾರೆ ಬಾ ಸಖಿಯೇ ॥ ದ್ರು ॥

ನೂತನಾಂಗಿಯೆ ಬಹುರೀತಿಗಳುಸುರುಲು
ಮಾತು ಮನ್ನಿಸದೆ ವಿನೀತನಾದಾತನಲ್ಲಿಗೆ ॥ ೧ ॥

ಅರವಿಂದಬಾಣಕ್ಕೆ ಗುರಿಯಾದಳೆಂದು ನಾ
ನೊರೆಯಲು ಕೇಳಿಯಾದರಿಸದಿರ್ದಾತನಲ್ಲಿಗೆ ॥ ೨ ॥

ಶ್ರೀಕರ್ಕೈನಿಲಯಪುರೋಕ ಚೆನ್ನವೀರೇಂದ್ರ
ನಾಕಲಿತ ಸರ್ವಲೋಕ ವಿಖ್ಯಾತನಲ್ಲಿಗೆ ॥ ೩ ॥

೭೧

ವಲ್ಲಭನೆ ಪೇಳಲಳವಲ್ಲ ಬಾ ನೀನೆ
ಫುಲ್ಲನೇತ್ರಿಯ ಭಾವ ಬಲ್ಲ ಕೋವಿದನೆ ॥ ದ್ರು ॥

ಶರಧಿರಾಜನ ಸುತನು ಸರಸಿಜಾಪ್ತನ ಸುತನು
ಸುರರ ಗುರುವಿನ ಸುತರು ಬಂದು ಮುತ್ತಿದರು
ಧರಣೀಶ ದಶರಥನ ಸುತನು ಸಿಂಹಿಕೆ ಸುತನು
ವರ ಕಾಶ್ಯಪನ ಸುತರು ಪಳಿಸಿಕೊಂಬುವರು ॥ ೧ ॥

ಬೇವಿನೆಲೆಗಳ ಕೆಳಗೆ ಬೆಳಗಿನಿಂದೊಪ್ಪುತಿಹ
ಕಾವನಂಬಿನೊಳು ಕಂಕಣಗಳುದಿಸುತಲಿ

ಮಾವಿನ ತಳಿರ್ಗಳ ಮೇಲಿಳಿದು ರಾಜಿಸುವ
ತಾವರೆಯಸಖನ ಪಕ್ಷಿಗಳಿಗಡರಿದವು ॥ ೨ ॥

ಭಿತ್ತಿ ಶಶಿ ತಿಥಿ ಶುಕ್ಲ ವೃತ್ತಕುಚವೆಂಬ ನುಡಿ
ಉತ್ತರದಿ ಬರೆದಿಹಳು ಓದಿ ನೋಡರಸನೆ
ಚಿತ್ತಜಹರ್ಯನಿಲಯ ಚೆನ್ನವೀರೇಶ್ವರನೆ
ಚಿತ್ತದಿ ತಿಳಿ ಭಾವಚಿತ್ರವೆಲೆ ಚದುರನೆ ॥ ೩ ॥

೭೨

ಸೊಕ್ಕುವಯಸಳೆ ನಿನಗೆ ಸೋಲದವರ್ಯಾರೆ
ಬೆಕ್ಕಸದಿ ನಿನ್ನನೆ ಬಯಸುವರೆ ರಮಣಿ ॥ ಪ ॥

ತಾರಕಮರ್ದನನು ನೀರಚರಕೇತನನು
ವಾರಿಧರವಾಹನನು ಮೊದಲಾಗಿ ಬಂದು
ನಾರಿರನ್ನಳೆ ನಿನ್ನ ವಾರಿದುರುಬನೆ ಕಂಡು
ಸಾರಿ ತಮಗೆಮಗೆಂದು ನುಡಿವರೆಲೆ ರಮಣಿ ॥ ೧ ॥

ಶರಧಿನಂದಿನಿಯು ಶಂಬರವೈರಿಸತಿಯು ಹಿಮ
ಕರನ ನಿಜರಾಣಿ ಮೊದಲಾಗಿ ಬಂದು
ಸುರುಚಿರಾಂಗಿಯೆ ನಿನ್ನ ಮೆರೆವ ಮುಖ ಕಂಡು ಬಿ
ತ್ತರದಿ ತನಗೆನಗೆಂದು ನುಡಿವರೆಲೆ ರಮಣಿ ॥ ೨ ॥

ಅಂಬುಭವಲೋಚನನು ಅಂಬುಜಸುಮಿತ್ರನು
ಕುಂಭಜಾತರು ನಿನ್ನ ಕುಚಕೆ ವಾದಿಪರೆ
ಕುಂಭಿನಿಯೊಳ್ಬನೆಲೆಯವಾಸ ಚೆನ್ನವೀರೇಶ
ನಂ ಬಿಡದೆ ಭಜಿಸಿದರೆ ಭಯವಿಲ್ಲ ರಮಣಿ ॥ ೩ ॥

೭೩

ಸುಮ್ಮನೆ ಹೋಗು ಸೊಗಸು ಮಾಡಬ್ಯಾಡ
ಸುಳಿದು ಬೀದಿಯೊಳಗೆ

ಗಮ್ಮಗಮ್ಮನೆ ಗಮಕಲಿ ಬೆರುತಿದಿ
ಏಕೆ ಎನ್ನ ಬಳಿಗೆ ॥ ಧ್ರು ॥

ಸಣ್ಣವಯದ ಸಂಪನ್ನ ಸೊಬಗಿನ
ಕನ್ಯೆ ಹುಡುಗಿ ನೀನೆ
ಗಿಣ್ಣಲಕುಚ ಸಡುಸಣ್ಣ ಒಲವ ಮೋಹಿನೆ
ಹಂಸೆಗಮನೆ
ಹೆಣ್ಣು ಕುಲಕೆ ತಲೆರನ್ನೆ ಎರಳೆಯ ಕಣ್ಣೆ
ಚಂದ್ರವದನೆ
ಹಣ್ಣುನಿಂಬಿಯ ಬಣ್ಣ ಮೈಯೊಳಗ
ಸನ್ನ ಮಾಡುದೇನೆ
ನಿನ್ನ ಎರಡು ಮೊಲೆ ಸನ್ನಿಧಿಲಿರುವುದು
ಮನ್ಮಾಥನ ಸದನ
ಚೆನ್ನಿಗರಾಯನ ಬಿನ್ನಪದವಳೆ
ಇನ್ನುಹೋಗ ಲಲನೆ ॥ ೧ ॥

ಕೋಟಿ ಪೆಣ್ಣುಗಳು ಸಾಟಿ ಬಾರರು
ಮಾಟರೂಪ ಕೊಬ್ಬೆ
ನೀಟುಗಾತಿ ನಿನ್ನ ನೋಟದ ಪೆಟ್ಟಿಗೆ
ಜೊಟಿಯಾದೆ ಹಚ್ಚೆ
ದಾಟಿಹೋಗೆ ನಿನ್ನವಟು ಸುಡಲಿ ನೀ
ಮೊಟುಬೇಡ ಹುಚ್ಚೆ
ಬೂಟಕಾಡೆ ನಿನ್ನಾಟವೊಲ್ಲ ಹೋಗೆ
ಏಟುಮಾಡಿಗಬ್ಬೆ
ಬೇಟಸಲ್ಲ ಬಹುನೀಟಿಸುವ ಕಳೆ
ನಾಟಿವಲಿವಬ್ಬೆ
ಕಾಟಕಮನಾತನೇಟು ಪೊವೆ
ವನಿತೆಜನಕೆ ಮಬ್ಬೆ ॥ ೨ ॥

ಏಕೆ ಬಲದ ಮೊಲೆಮ್ಯಾಕೆ ಸೆರಗವನು
ಹಾಕಿ ತೆರೆವೆದೆಗೆ
ಸಾಕು ಸಾಕು ಕಣ್ಣಾಕ ಹೊಡಿತಿ ಬಹು
ಪಾಪತಾವೆ ಎದೆಗೆ
ಚೀಕರಿಸದಿರು ಚೆಲ್ವಕರ ಪ್ರಾಯವ

ಜೋಕಿ ನಡಿಯೊ ಮನಿಗೆ
ಬೇಕಾದರೆ ಹಿಡಿ ಶ್ರೀಕಂಠನ
ಏಕವಾಗಿ ಒಳಗೆ
ಶೇಖರ ಐನಲೆ ಶ್ರೀಕರ ಚೆನ್ನವೀರ
ನೀ ಕರುಣಿಸೆ ಬೇಗೆ
ಕಾಕಬುದ್ಧಿಬಿಡು ಪಾಕ ಮಾಡು ಮನ
ಸಾಕಾರಾವ ನಿನಗೆ ॥ ೩ ॥

೭೪

ನೀನೆ ಕಿಸಿಸು ಮಾಡುವರೆ ಒಯ್ಯಾರೆ
ಕಿನಿಸು ಮಾಡುವರೆ ॥ ಧ್ರು ॥

ಜರಹುವರೇನನಿತಿನಿತೆಂದು ನೀ
ಕೊರಜಾಡುವರೆ ಸಮರತಿಯೊಳು ನೀ
ಸರಸೋಕ್ತಿಗಳಿಂದನುಕರಿಸದೆ ನೀ
ಪರವರನ ಜೋಸರಿಸದೆ ॥ ೧ ॥

ನೆರೆವಾತುರವ ಸೆರೆ ತಿಳಿಯದೆ ನೀ
ಮರೆವಧರವ ಚುಂಬನುಲ್ಲಾಸಕ್ಕೆ
ಕರೆವ ಭರವ ಪರಿಕಿಸದಾತನ
ಪರವಸಮಂ ಪರಿಹರಿಸದೆ ॥ ೨ ॥

ವರಸೈನೆಲೆಯ ಒಡೆಯ ಚೆನ್ನವೀರೇ
ಶ್ವರನಲ್ಲದೆ ಮೇಣ್ ಪೆರತುಂಟೇನೆ
ದರಹಸಿತಾನನ ದಯ ಸಂಪಾದಿಸಿ
ಪರಮಪ್ರವದೊಳಾದರಿಸದೆ ॥ ೩ ॥

೭೫

ಮಾರಬಲವು ವಿರಹಜನಕೆ ಸಾರಿತು
ನೀರೆ ನಿನ್ನ ಮನಸು ಜೋಕೆ ಹಾಡಿತು ॥ ಪ ॥

ಗಿಳಿಯರಥವನೇರಿಕೊಂಡು
ಅಳಿಯ ಪೌಜು ಕೂಡಿಕೊಂಡು
ನಳಿನಶರನು ಬರಲು ಜ್ವಾಲೆಯೇರಿತು ॥ ೧ ॥

ತುಂಬಿಹೆದೆಯ ಸುತ್ತಿ ಪೂವಿ
ನಂಬುಗಳನು ಕರದೊಳೆತ್ತಿ
ಶಂಬರಾರಿ ಬಿಡಲು ತಾಪ ಮೀರಿತು ॥ ೨ ॥

ಸುಲಲಿತೈನೆಲೆಯನಿಕಾಯ್ಕ
ಸುಲಭ ಚೆನ್ನವೀರಣಾರ್ಯ
ಒಲಿದ ಮೇಲೆ ಮದನ ಭಯವು ತೀರಿತು ॥ ೩ ॥

೭೬

ಪ್ರಿಯ ಕುಲಪುಂಗವ ಹೊ
ಪ್ರಿಯ ಕುಲಪುಂಗವ ಹೊ
ರತಿಸುಖ ರಸಮಾಯೆ ತ್ಯಜಿಸಿದ ನೀರೆ ಸಂಗ ವಾಹಹಾ
ಹಹಾಹಹಾಹ ॥ ಪ ॥

ಶುಕವಾಹನನ ಪಂಚಶರಗಳ ಹತಿಗೆ
ಚಕಿತಲೋಚನೇ ಗುರಿ
ಅಕಟಕಟಾಯಿತಂಗ ವಾಹಹಾಹಹಾಹಹಾಹ ॥ ೧ ॥

ಪ್ರಕಟಿಸಿದರೆಯೇನು ಫಲವಿಲ್ಲ ಬಾಲೆ
ಶಿಖಿನಖ ತನಗಿತ್ತೆ
ಸಖಿ ಜನರೊಳು ಭಂಗ ವಾಹಹಾಹಹಾಹಹಾಹ ॥ ೨ ॥

ಬಾಲೆ ಕುರಂಗನೇತ್ರೇ ಬಿನದ್ಯೆನೆಲೆಯ
ಲೋಲ ಚೆನ್ನವೀರೇಂದ್ರ
ಪಾಲಿಸು ಕೃಪಾಂಗ ವಾಹಹಾಹಹಾಹಹಾಹ ॥ ೩ ॥

೭೭

ಪರ್ವವನೆ ಮಾಡಿದಳೊ ಪದ್ಮನಯನೆ
ಓರ್ವ ಶ್ರೀಭೋಗಲಿಂಗೇಶಗೌತಣಮೊಡರ್ಚಿ ॥ ಪ ॥

ವನಿತೆಯು ಸುರಾಗದಕ್ಷತೆಯಿಟ್ಟು ವಿನುತ ಲೋ
ಚನದಿಂದ ತನ್ನ ಮಂದಿರಕೆ ಕರೆದೊಯ್ದು
ಘನಸ್ನೇಹದಿಂ ಕಾಯಕಭ್ಯಂಗನವ ಮಾಡಿ
ಅನುಮೋದ ಭಾಷ್ಪೋದಕದಿ ಮಜ್ಜನವನೆರೆದು ॥ ೧ ॥

ಸುದತಿ ತೊಡೆಯೆಂಬ ಪೀಠದ ಮೇಲೆ ಕುಳ್ಳಿರಿಸಿ
ವದನ ಕನಕದ ಭಾಜನದೊಳು ಷಡುರಸಕೆ
ಅಧಿಕಮಾಗೆಸೆವ ಅಧರಾಮೃತವನೆಡೆಮಾಡಿ
ಚದುರೆ ಸ್ತನಕುಂಭ ಕೈಗಿತ್ತು ಕರ ತೊಳೆಸಿದಳು ॥ ೨ ॥

ನಳಿನಮುಖಿ ಬಹುಮಾನದಿ ಸದ್ಗುಣ ಪೂ
ಗಳನಿತ್ತು ಸಾಧು ವೃತ್ತಿಗಳಿಂದ ಪೊಳೆವ
ನಳಿತೋಳ್ಗಳೆಂಬ ವಸ್ತ್ರವ ಪೆಗಲಿನೊಳ್ಪೊದಿಸಿ
ಲಲನೆಯಾಲಿಂಗನಾಭರಣಗಳನೊಲಿದಿಡುತ ॥ ೩ ॥

ಪರಮ ಸಂಭ್ರಮದ ಹೊರೆ ಹೊರಲಾರದವಳು ಮೈ
ಮರೆದು ಸುಖದಾನಂದ ಶರಧಿಯೊಳು ಮುಳುಗಿ
ಕರಣ ಮನ ಭಾವಂಗಳುಡುಗಿ ನಿಬ್ಬೆರಗಾದ
ಳರರೆ ಕಾಂತನೊಳು ಮನ ಬೆರೆಸಿ ನಿರ್ಮಳವಾಗಿ ॥ ೪ ॥

ಇಂತೆಸೆವ ಹಬ್ಬವನು ಮಾಡಿ ಮೆಚ್ಚಿಸಿರಲೇ
ಕಾಂತ ಮದಭಂಜನನ ಕರುಣವನೆ ಪಡೆದು

ಸಂತತೈನೆಲೆಯಪುರಸದನ ಚೆನ್ನವೀರೇಂದ್ರ
ನಂತರಂಗದ ಬಯಕೆಗನುಕರಿಸುತಿಪೆ ಪ್ರೌಢೆ ॥ ೫ ॥

೭೮

ಮೆರೆವೈನಿಲಯಪುರ ನಿಜವಾಸ ಚೆನ್ನ
ವೀರೇಶನತಿ ಪ್ರೀತಿಲಿ ಒಲಿಸುವಳು
ಸ್ತ್ರೀಕುಲರನ್ನೆ ಸೊಬಗಿನ ಕನ್ನೆ
ನುತಿಸುತ ಪರಮಾನಂದ
ಶಿವನ ಭಜಿಸುವಳೊ ಭವ ತ್ಯಜಿಸುವಳೊ
ಗತಿಸಂಪದದೊಳ್ಕೂಡಿದ
ಮೋಕ್ಷಾಂಗನೆಯೊ ವರ ಮಾನಿನಿಯೊ ॥ ೫ ॥



೧

ಶ್ರೀಗುರುಕರುಣ ನಿನಗೆ ಪೂರ್ಣವಾಯಿತೆ ತಂಗಿ ಕೇಳೆ
ಬ್ರಹ್ಮಯೋಗ ಸುಖಾನಂದ ಪದವು ಕೈಸೇರಿತೆ ತಂಗಿ ಕೇಳೆ ॥ ಪ ॥

ಮೂರಾರು ಮನೆಗಳ ದಾರಿ ಸಾಧಿಸಿದಲ್ಲೆ ತಂಗಿ ಕೇಳೆ
ದಿವ್ಯ ತಾರಕಬ್ರಹ್ಮವ ಸೇರಿ ಸುಖಿಸಿದಲ್ಲೆ ತಂಗಿ ಕೇಳೆ
ಆರರಿಯದ ವಸ್ತುವಾರೈದು ಕಂಡೆಲ್ಲೆ ತಂಗಿ ಕೇಳೆ
ಭವವ ಬೇರನು ತರಿಸಿತ್ತು ಬಾರದಂತಾದಲ್ಲೆ ತಂಗಿ ಕೇಳೆ ॥ ೧ ॥

ರೂಪಿಲ್ಲದವನೊಳು ರೂಪು ಬೆರೆಸಿದಲ್ಲೆ ತಂಗಿ ಕೇಳೆ
ಕಷ್ಟ ತಾಪತ್ರಯಂಗಳು ತರಿದೊತ್ತಿ ನಿಂದೆಲ್ಲೆ ತಂಗಿ ಕೇಳೆ
ವ್ಯಾಪಿಸಿದವಲಂಬಿಕೆ ಎರವು ಆದೆಲ್ಲ ತಂಗಿ ಕೇಳೆ
ನಿನ್ನ ನೋಂಪಿಗೆ ಸರಿಯಿಲ್ಲ ನುಡಿಯಲಿಕಳವಲ್ಲೆ ತಂಗಿ ಕೇಳೆ ॥ ೨ ॥

ಶಿರಗುಂಪಗುಡ್ಡದ ದೊರೆಯನ ಸಾಮ್ರಾಜ್ಯ ತಂಗಿ ಕೇಳೆ
ಕೈಯ ಸೆರೆಮಾಡಿಕೊಂಡೆಲ್ಲೆ ಸರಿ ನಿನಗಾರಮ್ಮ ತಂಗಿ ಕೇಳೆ
ವರದೈನೆಲೆಪುರವರ ಚೆನ್ನವೀರೇಶ ತಂಗಿ ಕೇಳೆ
ನಿನ್ನ ಕರ ಮನ ನೋಟದಿ ಬೆರೆದಮೇಲಿನ್ನೇನೆ ತಂಗಿ ಕೇಳೆ ॥ ೩ ॥

೨

ಮಾನಿನೆ ಬಾರೆ ನೋಡುವ ಮುಕ್ತಿ
ಸ್ಥಾನ ಮಂಟಪದೊಳಾಡುವ
ಜ್ಞಾನಪ್ರವೀಣ ಸದಾನಂದ ಸುಖದೊಳು
ನಾನುನೀನಿಬ್ಬರೊಂದಾಗಿ ಕೂಡುವ ॥ ಪ ॥

ಮೂರಾರು ಗುಣವ ಭೇದಿಸುವ
ಜೀವ ಮೂರಾರು ಮನೆಯ ಸ್ಥಾಪಿಸುವ

ಮೂರು ಕೂಟಾಗ್ರದೊಳೇರಿ ಬಯಲಿನೊಳಗೆ
ತಾರಕಬ್ರಹ್ಮದಿ ಸೇರಿ ಬಿಸದಿಸುವ ॥ ೧ ॥

ಚಂದ್ರ ಸೂರ್ಯರಯೋಗ ಬಲಿವ ಬ್ರಹ್ಮ
ರಂಧ್ರಸೌಧವ ಪೊಕ್ಕು ನಲಿವ
ಸಾಂದ್ರಪ್ರಾಗಸಪಮೃತವನು ಸವಿದು ನಪ್ಯ
ರುಂದ್ರ ಮಧುರಸಾರಗಾನ ಕೇಳುವ ॥ ೨ ॥

ರೂಪಿರ್ದು ರೂಪಿಲ್ಲದಿರುವ ತನ್ನ
ರೂಪ ಬಲ್ಲವರೊಳಗಿರುವ
ದೀಪಿತ್ಯಸಲಧಾಮ ಚೆನ್ನವೀರೇಂದ್ರನ
ಶ್ರೀಪಾದಾಂಬುಜಕೆ ಸದ್ಭೃಂಗನಾಗಿರುವ ॥ ೩ ॥

೩

ನೋಡು ನಿಜಸುಖ ನಿನ್ನೊಳು ಅಂಗದೊಳು
ರೂಢಿಸಿದ ಬ್ರಹ್ಮಲೀಲೆ ಮನವೇ ॥ ಪ ॥

ಆರುಭವನಗಳ ಮೇಲೆ ಕರಮೆಸೆವ
ಮೂರು ಮಂಡಲಧ ನಡುವೆ ಸತತ
ತೋರುತಿಪ ಚಿಜ್ಯೋತಿಯ ಕಂಡು ನೀ
ಸಾರ ಶಿವಪದದ ಗೊತ್ತುವೇತ್ತು ॥ ೧ ॥

ಈಡ ಪಿಂಗಳಗಳೆಂಬ ಘನತರದ
ನಾಡಿಗಳ ತುದಿಯ ಮೇಲೆ ನಲಿದು
ಪಾಡುತಿಪ ಗಾನ ಕೇಳಿ ಅಮೃತವ
ಗಾಡದಿಂ ಸವಿದುವೊಲಿದು ತಿಳಿದು ॥ ೨ ॥

ಇಂತಾದ ಬಳಿಕ ನಿನಗೆ ಸರಿಯಾರು
ಅಂತಕಕೆ ಅಂಜುವ ನಿಸದ
ಸಂತತ್ಯನೆಲೆಯಾಲಯ ಪರಮುನಿ
ಶ್ಚಿಂತ ಚೆನ್ನವೀರೇಶನಾಶ್ರಯನ ॥ ೩ ॥

೪

ನೋಡುವ ಬಾರೆ ಬಾ ತಂಗಿ ಚಂದ್ರ
ಚೂಡನ ರಥ ಲಲಿತಾಂಗಿ
ನಾಡಿಗೆ ಹುಬ್ಬಳ್ಳಿ ನಡುಬೀದಿಯೊಳು ಮಿಗೆ
ರೂಢಿಸಿ ಸರ್ವಕಾಲದಲಿರ್ಪ ತೇರ ॥ ಪ ॥

ಮೂರೈದು ಗುಣವ ಭೇದಿಸುವ
ಮುಂದೆ ಮೂರು ಸೀಮೆಗಳು ಸಾಧಿಸುವ
ಮೂರು ಮಾರ್ಗದ ಮಧ್ಯದಾರಿ ಹಿಡಿದು ತೊಂಬ
ತ್ತಾರು ಸೋಪಾನಂಗಳೇರಿ ನಿಲ್ಲುವ ॥ ೧ ॥

ಮೂರಾರು ಮನೆ ನಾಲ್ಕು ಗಾಲಿಯದಕೆ
ಪೂರೈಸಿದೆಂಟು ಕಂಭದಲಿ
ತೋರುವಿಪ್ಪತ್ತೈದು ಚಾರು ಕಳಸಗಳ
ಸಾರಿಲಿ ಶತಕೋಟಿಸೂರ್ಯಮಂಡಲವ ॥ ೨ ॥

ನಡುದಾರಿಯೊಳು ಮೂಕನಿಪನು ಅವಗೆ
ನಡುಗವೆ ಆಚೆಗಾಗುವ
ಕಡು ದೊಡ್ಡ ಸರ್ಪನಹೆಡೆ ಕಂಡು ಪವರದೆ
ನಡೆದು ಘೋರೆಂಬನಾದವ ಕೇಳುತ್ತಿರುವ ॥ ೩ ॥

ಬಿಚ್ಚಿಕಟ್ಟುವ ತೇರದಲ್ಲ ಬಿಡದೆ
ನಿಚ್ಚ ನೋಡುವವರಿಗದಲ್ಲ
ಅಶ್ಚರ್ಯತರ ಪ್ರಭೆ ಪೆಚ್ಚಿ ಗಗನಕೇರಿ
ಪಶ್ಚಿಮಗಿರಿಯಲ್ಲಿ ಬೆಳಗು ಬಿದ್ದಿಹುದು ॥ ೪ ॥

ಇಂತೊಪ್ಪುವಮಲ ಪುಷ್ಪಕವ
ನಿಶ್ಚಿಂತಭಾವದಿ ನೋಡಿ ನಲಿವ
ಸಂತತೈಸಲೆಯ ನಿಶಾಂತ ಚೆನ್ನವೀರೇಂದ್ರ
ನಂತ ಕಾಲದೊಳು ತಾನಾಂತು ರಾಜಪ

೫೦

ನೋಡಿದೆ ನೆನೆದು ಲಿಂಗಯ್ಯನ ನೋಡಿದೆ
ನೋಡಿದೆ ಮನುಜ ಕೊಂಡಾಡಿ ವರಗಳನ್ನು
ಬೇಡಿ ಪ್ರೇಮದೆ ಪೂಜೆ ಮಾಡಿ ಮನವನಿಟ್ಟು ॥ ದ್ರು ॥

ನಾಕದಿಂವತ್ತತ್ತ ಜಡೆಯೊ ನಾಗ
ಲೋಕದಿಂದತ್ತತ್ತಲಡಿಯೊ ವಿಷ್ಣು
ಲೋಕೇಶ ಹರಿಯವಲೋಕನಕ್ಕೆ ಮೀರಿ
ದಾಕಾರವನುಳ್ಳ ಶೀಕರಾಧ್ಯಕ್ಷನ ॥ ೧ ॥

ನವಬ್ರಹ್ಮರಿಂದೆ ಪೂಜಿತನ ದಿವ್ಯ
ನವಗ್ರಹದಿಂದೆ ರಾಜಿತನ ನಿತ್ಯ
ನವಖಂಡ ಪೃಥ್ವಿಯಾರ್ಣವ ಸಂಭರಿತನ
ನವಭೈರವಗಣಸ್ತವನ ಸಂಪ್ರೀತನ ॥ ೨ ॥

ಸೂರ್ಯಾಗ್ನಿ ಚಂದ್ರಲೋಚನನ ಮಹಾ
ವೀರಾತ್ಮ ವಿಘ್ನಮೋಚನನ ದಿವ್ಯ
ದಾರ್ಢ್ಯಮ ಕೋಟಿಭಧುರ್ಯ ಮಹಾಮಹಾ
ವೀರ್ಯಭುಜೋತ್ಕಟ ಶೌರ್ಯ ವಿಖ್ಯಾತನ ॥ ೩ ॥

ನಕ್ಷತ್ರನಾಥಶೇಖರನ ಸರ್ವ
ನಕ್ಷತ್ರಮಾಲಾಧರನ ನವ್ಯ
ಲಕ್ಷ್ಮೀಶ ವಿಧಿಯ ಸದ್ವಕ್ಷಾಯುಧಗಳ
ಯಕ್ಷರೂಪದಿ ಜಯಿಸಿದಕ್ಷಯಾನಂತನ ॥ ೪ ॥

ನಾರಾಯಣಪೇಟೆ ನಿಲಯ
ಸೂರಾತ್ಮಜ ಮದವಿಲಯ ವಿಶ್ವ
ಸಾರ್ವನಿಲಯಸಾರ ಶೀಗುರು ಚೆನ್ನ
ವೀರನೆನಿಸಿ ಕರ ಸೂರೆಗೊಂಡಾತನ

೬

ಶ್ರೀಗುರುವಿನ ದಿವ್ಯ ಶ್ರೀಪಾದವ ಕಂಡೆ
ವಾಗೀಶಪ್ಪುತ ಪುರಂದರ ವಂದ್ಯನ ಕಂಡೆ ॥ ಪ ॥

ಭೋಗಿಭೂಷಣ ಸಾರ್ವಭೌಮನ ಕಂಡೆ
ಯೋಗಿ ಪ್ರಸ್ನಿಲಯ ಕರ್ಪೂರಯೋಗಿನ ಕಂಡೆ ॥ ೧ ॥

ಭವ್ಯ ಮಂಗಲರೂಪ ಭಾಸುರನ ಕಂಡೆ
ನವ್ಯ ಸೌಂದರ ರುದ್ರಾಣಿನಾಥನ ಕಂಡೆ ॥ ೨ ॥

ದೇವಗಂಗಾಮಕುಟದೇವನ ಕಂಡೆ
ಭಾವಜಾಹಿತ ಸರ್ವಜ್ಞಭಾವನ ಕಂಡೆ ॥ ೩ ॥

ಸಾಮಜಾಜಿನಚಲ ಸಾರನ ಕಂಡೆ
ಸೋಮರ್ಕಾನಲ ನೇತ್ರನ ಸೌಮ್ಯನ ಕಂಡೆ ॥ ೪ ॥

ಕಾರುಣ್ಯಾಂಬುಧಿ ಕಾಲಕಾಲನ ಕಂಡೆ
ಭೂರಿ ಕರ್ಮವಿನಾಶನ ಭೀಮನ ಕಂಡೆ ॥ ೫ ॥

ನಿಗಮ ಘೋಟಕ ಸತ್ಯನಿತ್ಯನ ಕಂಡೆ
ವಿಗತ ಪ್ರತ್ಯೂಹ ಪರಮವೀರನ ಕಂಡೆ ॥ ೬ ॥

ವಿಲಸಿತ್ಯನೆಲೆಪುರಿಯ ಈಶನ ಕಂಡೆ
ಸುಲಭ ಶ್ರೀ ಚೆನ್ನವೀರಾಚಾರ್ಯನ ಕಂಡೆ ॥ ೭ ॥

೭

ಕಂಡೆನೊ ಹೈಮವತಿಪ್ರಿಯನ
ಕಂಡೆ ಶೌರ್ಯನ ದಂಡಾಸುರಹರ
ಪುಂಡರೀಕಭವ ತುಂಡಪಹತನ ॥ ಪ ॥

ಸಿಂಧುತೂಣ ಮುಕುಂದಬಾಣ ಮಾರ
ಮಂದಿರಧನು ಸುರಸಿಂಧು ಸಂಧೃತನ ॥ ೧ ॥

ನೀಲಕಂಠನಾಭನ ಶೂಲಕರ
ಫಾಲನೇತ್ರ ಗಣಜಾಲನಮಿತನ ॥ ೨ ॥

ಕುಟಿಲಕಟಕವಿಘಟಜಿತ ದಿವಿಜ ಮ
ಕುಟ ತಟಘಟಿತೋತ್ಕಟ ಸ್ಫುಟಕ್ರಮನ ॥ ૩ ॥

ಶತಧೃತಿ ಶತಮುಖ ಶತದಳಾಕ್ಷನ
ಪತಿಕ್ರತುಭೂಜ ಸಂತತಿ ಸನ್ನುತನ ॥ ೪ ॥

ಸಾರ ನುತ್ಯನೆಲೆಗಾರ ಧೀರ ಚೆನ್ನ
ವೀರಣಾರ್ಯ ಕವಿವರಮಹಿತನ ॥ ೫ ॥

೮

ಬೇಡಲೇಂ ನಾನನುಪಮದಾತ
ರೂಢಿಸಿಯೆನ್ನೊಳು ನೀನಿರುತಿರೆ ದೇವನಾಂ ಬೇಡಲೇಂ
ಶುಚಿದೇಹನೆ ಶುಚಿದೇಹ ಸುಹಿತನಾಂ ಬೇಡಲೇಂ ॥ ದ್ರು ॥

ಹರಿಯಜರಿಗೆ ಗೋಚರಿಸದ ಚರಣ
ಸ್ಥಿರದಿಂ ಕರದೊಳಗಿರುತಿರೆ ದೇವನಾಂ ॥ ೧ ॥

ಶ್ರುತಿ ಶಾಸ್ತ್ರಾಗಮ ನುತಿಗೆ ನಿಲುಕದ
ಪ್ರತಿಮನೆ ಸುಲಭನಾಗಿರುತಿರೆ ದೇವನಾಂ ॥ ೨ ॥

ಒಳಹೊರಗೆ ಪ್ರಜ್ವಲಿಸುತ ನೀನೆ
ನ್ನೊಳು ಸತತಂ ಬಿಡದಿರುತಿರೆ ದೇವನಾಂ ॥ ૩ ॥

ಸನಕ ಸಾನಂದನ ಮುನಿಜನದೂರ
ಅನುಕರಿಸೆನ್ನ ರಕ್ಷಿಸುತಿರೆ ದೇವನಾಂ ॥ ೪ ॥

ಸ್ಫುರದ್ಯೆನೆಲೆಪುರವರ ಚೆನ್ನವೀರೇ
ಶ್ವರ ತವಪೂರ್ಣಕೃಪಮಿರುತಿರೆ ದೇವನಾಂ ॥ ೫ ॥

೬

ಸತ್ಯ ಶ್ರೀಗುರುವಿನ ಕರುಣವ ಪಡೆದು
ಮಿಥ್ಯಭವದ ವೃಕ್ಷಮೂಲವ ಕಡಿದು
ನಿತ್ಯವಾದ ಸುಚಿತ್ತವ ಬಲಿದು
ಗೊತ್ತನರಿದು ತಾನೆ ತನ್ನೊಳು ತಿಳಿದು || ದ್ರು ||

ತಾನೆ ತನ್ನೊಳು ತಿಳಿದ ಬಳಿಕ
ಹನನವಾಯಿತು ಹುಟ್ಟು ಸಾವುದ ಮೊಳಕೆ
ಏನಿಲ್ಲದೆ ಹೋಯಿತು ಸಂಸಾರ ಬಯಕೆ
ಜ್ಞಾನ ಪ್ರಕಾಶದಿ ತೂಗುವ ಜೋಕೆ || ೧ ||

ಬಯಲಿಗೆ ಕುಂಬಾರ ಮಾಡಿದ ಗಡಿಗೆ
ಬಯಲು ತಿಳಿಯದಣ್ಣ ಮರುಳು ಜನರಿಗೆ
ತೈಲವಿಲ್ಲದ ಜ್ಯೋತಿ ಉರಿವುದು ಒಳಗೆ
ಲಯವಾಗಿ ಹೋಯಿತು ತಿಳಿಯೊ ನಿನ್ನೊಳಗೆ || ೨ ||

ಪಶ್ಚಿಮಗಿರಿಯಲ್ಲಿ ಚಂದ್ರನ ಕಂಡು
ನಿಶ್ಚಲವಾಯಿತು ಬಹುಚೂಟಿಗೊಂಡು
ಹೊಚ್ಚಿದ ಮಾಯಸಂಸಾರದ ಭಂಡು
ಕಿಚ್ಚು ಪಾಲಾಯಿತೆಂದು ಬೊಬ್ಬಿ ಹೊಯ್ಕೊಂಡು || ೩ ||

ಕಾಯಕ್ಕೆ ಹತ್ತಿದ ಬಹುಪಾಶ ಗಾಳಿ
ಮಾಯ ಮೋಹ ಕೂಡಿ ಜಜ್ಜಿದ ಬಳ್ಳಿ
ದೇಹಕ್ಕೆ ಬಡಿವಂತ ತಾಪತ್ರಯ ಚುಳ್ಳಿ
ಹೇಯವಾಯಿತು ಕೆಟ್ಟಸಂಸಾರ ತಳ್ಳಿ || ೪ ||

ಹಂಗು ಹರಿದು ಶುದ್ಧವಾದ ಮಹಿಮಂಗೆ
ಅಂಗದ ಪರಿಯೇನು ಅಂತರ್ಸಾಧಕಂಗೆ
ಮಂಗ ಮರುಳಿನಂತಹ ಜನರ ಕಣ್ಣಿಗೆ
ಲಂಘಿಸಿದನು ಪರಬ್ರಹ್ಮನ ಮನೆಗೆ || ೫ ||

ಅಂಗವಿಲ್ಲದ ಪುರುಷನ ಒಡಗೂಡಿ
ಅಂಗದ ಲಜ್ಜೆ ನಾಚಿಕೆ ಹೋಯಿತು ಓಡಿ

ಭಂಗ ಭಂಡ ಹೋಳಿ ಪದಗಳು ಹಾಡಿ
ಅಂಗವೆಂಬ ಗ್ರಾಮದೊಳು ತಿರುಗಾಡಿ ॥ ೬ ॥

ತಪ್ಪದೆ ಎಲ್ಲರ ಮನೆಯೊಳು ಹುಟ್ಟುವ
ಉಪ್ಪದ್ರ ಸಕಲ ಜನರಿಗೆ ತೋರುವ
ಒಪ್ಪುವ ಕಾಮನೆಂಬ ಕುರುಳುವ
ಜಪ್ಪಿಸಿ ನೋಡಿದರೆ ಅಡಗಿತು ಮಲವ ॥ ೭ ॥

ಮೂರು ಲೋಕವನೆಲ್ಲ ಸುಲಿವಂಥ ಠಕ್ಕ
ಚೋರ ಇಂದು ನಮ್ಮ ಕೈಯೊಳು ಸಿಕ್ಕ
ಹಾರಿಹೋಯಿತು ಮೂರು ಅಂಜಿಕಿ ದುಃಖ
ಸಾರಿ ಬೊಬ್ಬಿಡುತಲಿ ಮನದೊಳು ನಕ್ಕ ॥ ೮ ॥

ಆ ಮನೆಯೊಳು ಕುರುಳುಭಾನವ ಮೆಟ್ಟಿ
ಕಾಮನೆಂಬ ಕುರುಳು ಹೆಡಗುಡಿ ಕಟ್ಟಿ
ತಾಮಸದಲಿ ಹಿಡಿದು ಹಾಕುತಲಿ ಮೆಟ್ಟಿ
ಆ ಮಹಾ ಬಾಜರದೊಳು ಕುರುಳು ತಂದೊಟ್ಟಿ ॥ ೯ ॥

ಸೆರೆಯ ತಂದು ಕುರುಳು ಸಾಲಿಲಿ ಹಚ್ಚಿ
ದುರುಳನೆಂಬೊ ಬುದ್ಧಿ ಹುಲ್ಲನೆ ಹಚ್ಚಿ
ಪರಮಸಂತೋಷ ಮನದೊಳು ಹೆಚ್ಚಿ
ಗುರುಮಂತ್ರವೆಂಬ ಕೆಂಡವನು ತಂದ್ಹಚ್ಚಿ ॥ ೧೦ ॥

ಕಾಮನ ಸುಡುತಲಿ ಆಡಿದ ಹೋಳಿ
ನೇಮ ನಿರಾಂಬರ ವೇಷವ ತಾಳಿ
ತ್ರಿಮಲ ನಟ್ಟಿರ್ದ ಬೇರನೆ ಕೀಳಿ
ಜೊಮ್ಮಿಸಿ ಕಾಲನ ಪುರಕಿಟ್ಟ ದಾಳಿ ॥ ೧೧ ॥

ಧುಮ್ಮನ ಸಾಲಿಗಿ ಮಾಡಿ ಸಂಸಾರನೆಲ್ಲ
ಹಮ್ಮುದಿಮ್ಮು ಸುಟ್ಟು ಹುಡಿಯಾದುವೆಲ್ಲ
ಬ್ರಹ್ಮರಂಧ್ರರಸ ಕುಡಿದನು ಪ್ಯಾಲ
ದಿಮ್ಮು ಹತ್ತಿತು ಪ್ರಣಮನಾದ ವಿಜಾಲ ॥ ೧೨ ॥

ಹುಟ್ಟು ಬೆಳೆವ ಬೀಜ ಹುರಿದನು ಪುಂಡ
ಹುಟ್ಟದ್ಹಾಂಗೆ ತಾ ಆದನು ಷಂಢ

ಸೃಷ್ಟಿ ಮೂಜಗವೆಲ್ಲ ತೃಣದಂತೆ ಕಂಡ
ಪೆಟ್ಟು ಹಾಕಿದನು ಬಹು ಪ್ರಚಂಡ ॥ ೧೩ ॥

ತಂದೆಯ ಸತಿಯಳು ಮಗನಿಗೆ ಕೊಟ್ಟ
ಕಂದನ ಸತಿ ತಂದೆಗೊಪ್ಪಿಸಿ ಬಿಟ್ಟ
ಒಂದಾದ ಸುದ್ದಿಯ ಠಾವಿಲ್ಲ ಮುಟ್ಟ
ಹೊಂದಿಕಿ ದೊರಕದು ಜನರಿಗೆ ಗುಟ್ಟ ॥ ೧೪ ॥

ತನ್ನಂತೆ ಮಾಡಿದ ಸದ್ಗುರುರಾಯ
ಸನ್ನುತ ಧರೆಯೊಳಗೈನುಲಿ ನಿಲಯ
ಚೆನ್ನವೀರದೇವ ಮೋಕ್ಷಪ್ರದಾಯ
ಉನ್ನತಗಿರಿಯೊಳು ತೋರಿದ ಛಾಯಾ ॥ ೧೫ ॥

೧೦

ಕೇಳಿರಿ ನೀವೆಲ್ಲ ಕೌತುಕವಾದುದು ಇನ್ನೇನಿನ್ನೇನು
ನೋಡಿ ಹೇಳಲಿಕಳವಲ್ಲ ಸಾಧಿಸಿದವ ಬಲ್ಲ ಇನ್ನೇನಿನ್ನೇನು ॥ ಧ್ರು ॥

ಅಣ್ಣ-ತಮ್ಮರ ಮೋರಿ ಬೆನ್ನುಕಡ್ಯಾದವು ಇನ್ನೇನಿನ್ನೇನು
ಅವರ ಕಣ್ಣಿನ ಮೇಲೆರಡು ಕಣ್ಣುಗಳಾದವು ಇನ್ನೇನಿನ್ನೇನು
ಸಣ್ಣ ಇರುವೆ ಏಳು ಸಾಗರ ನುಂಗಿತು ಇನ್ನೇನಿನ್ನೇನು
ಬಹು ಬಣ್ಣದ ಮೊಲವಾರು ನಾಯಿಗಳ ಸೀಳಿತು
ಇನ್ನೇನಿನ್ನೇನು ॥ ೧ ॥

ಬಾಯಿಯಿಲ್ಲದ ಕೂಸು ಬ್ರಹ್ಮಾಂಡ ನುಂಗಿತು ಇನ್ನೇನಿನ್ನೇನು
ಅಲ್ಲಿ ಮಾಯಾದಿಪುರವೆಂಟು ಸುಟ್ಟು ಬೂದ್ಯಾದವು ಇನ್ನೇನಿನ್ನೇನು
ರಾಯನ ಹೆಂಡತಿ ರಂಡ್ಯಾಗಿ ಪಡೆದಳು ಇನ್ನೇನಿನ್ನೇನು
ಅಲ್ಲಿ ಕಾಯವಿಲ್ಲದ ಗಿಳಿ ಕಡಿಗೋಡಿ ಉಳಿಯಿತು
ಇನ್ನೇನಿನ್ನೇನು ॥ ೨ ॥

ಉತ್ತರಭಾಗದಿ ಉರಿವುದು ಜ್ಯೋತಿಯು ಇನ್ನೇನಿನ್ನೇನು
ಅದರೊತ್ತಿಲಿ ಮುಪ್ಪುರದಗುಸೆಯು ತೆರದಾವು ಇನ್ನೇನಿನ್ನೇನು

ಸತ್ತವನನೆತ್ತುವೆನೆಂದವ ಸತ್ತನು ಇನ್ನೇನಿನ್ನೇನು
ಅಲ್ಲಿ ಸತ್ತು ಬಿದ್ದವ ಎದ್ದು ಎತ್ತಿಕೂಗಿಟ್ಟನು ಇನ್ನೇನಿನ್ನೇನು ॥ ೩ ॥

ಮೈಯಿಲ್ಲದವಳಾರು ಮಕ್ಕಳ ಹಡೆದಳು ಇನ್ನೇನಿನ್ನೇನು
ಒಂದೆ ಉಯ್ಯಾಲದೊಳಗಿಟ್ಟು ಜೋಯೆಂದು ಹಾಡ್ಯಾಳು
ಇನ್ನೇನಿನ್ನೇನು
ರಯ್ಯಮಾದಾದ್ರಿಲಿ ರತ್ನ ಪ್ರಜ್ವಲಿಸಿತು ಇನ್ನೇನಿನ್ನೇನು
ಅದನು ಕೈಯಲಿ ಪಿಡಕೊಂಡು ಕಡಿಯಲಿ ನಿಂದನು
ಇನ್ನೇನಿನ್ನೇನು ॥ ೪ ॥

ಮೂಕನು ತಾನು ಕನಸು ಕಂಡ ತೆರನಾಯಿತಿನ್ನೇನಿನ್ನೇನು
ಮೂರು ಲೋಕದೊಳಾಶ್ಚರ್ಯ ನುಡಿಯಲು ಸತ್ಯವು ಇನ್ನೇನಿನ್ನೇನು
ಶೀಕರ್ಯನೆಲೆಪುರವಾಸ ಚೆನ್ನವೀರೇಶ ಇನ್ನೇನಿನ್ನೇನು
ತಾನೆ ಸಾಕಾರವಾಗೆನ್ನಕರದೊಳು ಬೆರೆದನು ಇನ್ನೇನಿನ್ನೇನು ॥ ೫ ॥

೧೧

ಎಂಥ ಕೌತುಕವು ನೋಡಲೆ ಜಾಣನೆ ಇದ
ರಂತಬಲ್ಲವರ ಸೇವಕನಾಗಿ ನಾಂ ಪೇಳ್ವೆ ॥ ಪ್ರ ॥

ತಲೆಯಿಲ್ಲದಟ್ಟೆಯನೆ ಜಗವೆಲ್ಲ ನುಂಗಿತು
ಸಲೆ ರುಂಡನಿಲ್ಲದ ತಲೆ ಗಗನ ನುಂಗಿತು
ತಲೆ ಬೇರೆ ಧಂಡ ಬೇರೆ ಆಗೆ ಮನಚರಿಸಿತು
ತಲೆಯನು ಅಟ್ಟೆಯನು ಬಯಲ ನುಂಗಿತು ॥ ೧ ॥

ಚಿತ್ತಿನ ಮನೆಯೊಳಗೆ ಸತ್ತವನು ದಾರೆಂದು
ಎತ್ತಲಿಕೆ ಹೋದವನು ಸತ್ತುಬಿದ್ದ
ಸತ್ತವನು ಎದ್ದು ತಾನೆತ್ತಿ ಕೂಗಿಡುತಿಹನು
ನೆತ್ತಿಲ್ಲದವರಿಂದರ ನೆಲೆಯರಿಯರಣ್ಣ ॥ ೨ ॥

ಕೋಣನ ಕೋಡಕೊನಿಲೇಳ್ನೂರು ಎಪ್ಪತ್ತು
ಮಾಣದೆ ಸೇದ ಬಾವಿಗಳು ಅದರೊಳಗೆ

ಜಾಣೆ ಒಬ್ಬಳು ಒಗೆವ ಸತಿಯ ಮೂಗಿನ ತುದಿಲಿ
ಆನೆ ಇಪ್ಪತ್ತೈದು ಆಡುವುದು ಕಂಡೆ ॥ ೩ ॥

ಹುಟ್ಟಿದ ಶಿಶುವಿಂಗೆ ತೊಟ್ಟಿಲೊಳು ಮಲಗಿಸುತ
ಮುಟ್ಟಿ ತೂಗುತಲಿ ಜೋಗುಳ ಪಾಡಲು
ತೊಟ್ಟಿಲವನೆದ್ದು ತಾಯಿಯ ಮಗನ ನುಂಗುತಲಿ
ಬಟ್ಟ ಬಯಲಾಯಿತು ಬಹು ಚೋದ್ಯವಣ್ಣ ॥ ೪ ॥

ಹೇಳ ಹೆಸರಿಲ್ಲದಾತ ಕೈಯ ಪಿಡಿದೊಬ್ಬ
ಗಾಳಿಗಳನೊತ್ತುತ್ತೈಸಲೆಯಪುರ ನಿಲಯ
ಲೋಲ ಶ್ರೀಚೆನ್ನವೀರೇಶನೊಳಗಿಪ ಮೂರು
ಓಲಗವ ತಾ ಮೀರಿ ನಿಂದನಂತೆ ॥ ೫ ॥

೧೨

ಶ್ರೀಕರ ಸ್ವಚ್ಛಂದ ಶೋ
ಭಾಕರ ಚಿತ್ಸಂಗ ಮಂಗ
ಳಾಕರ ಮಹಿಮಸಮುದ್ರನೆ । ಏ ಶ್ರೀಗುರುರಾಯ
ಲೋಕನಾಥ ರಕ್ಷಿಸೆನ್ನನು ॥ ದ್ರು ॥

ಭೂಮಿ ಗಗನವೊಂದು ಮಾಡಿ
ಸೋಮ ಸೂರ್ಯರೊಂದುಗೂಡಿ
ನಾಮರಹಿತ ನಿಮ್ಮ ಕೈವಿಡಿದು । ಏ ಶ್ರೀಗುರುರಾಯ
ನೇಮಭಾವ ನಮಗಿನ್ನೆಲ್ಲಿಹುದು ॥ ೧ ॥

ನೀರಿನ ಕೈಕಾಲು ಮುರಿದು
ಮಾರುತನ ತಲೆಯ ತರಿದು
ಮೀರಿದಗ್ನಿ ಕಿವಿ ಮೂಗ ಕೊಯ್ದು । ಏ ಶ್ರೀಗುರುರಾಯ
ಸಾರಸುಖದೊಳಿಟ್ಟು ಸಲಹುವುದು ॥ ೨ ॥

ತಲೆಯನಿಲ್ಲದವನು ಒಬ್ಬ
ನೆಲೆಯವಿಲ್ಲದವನ ಕೂಡಿ

ತಲೆಯವೊಳಗೆ ತಲೆಯಕಂಡನು । ಏ ಶ್ರೀಗುರುರಾಯ
ತಲೆಯವೊಳಗೆ ಮಾಯವಾದನು ॥ ೩ ॥

ರಕ್ಕಸಿಗೈವರಿಬ್ಬರು
ಮಕ್ಕಳಾಗಲವಳು ತೊಟ್ಟಿ
ಲಿಕ್ಕಿ ಜೋಗುಳಹಾಡಿ ತೂಗಿತ್ತು । ಏ ಶ್ರೀಗುರುರಾಯ
ಮಕ್ಕಳಸಹ ತೊಟ್ಟಿಲ ನುಂಗಿತ್ತು ॥ ೪ ॥

ಏಳುವೊಂದು ಮುಖದವನು
ಏಳೇಳು ಬಾಯಿಗಳಿಂದ
ಏಳುಮೊಲೆಯ ಹಾಲು ಸವಿದನು । ಏ ಶ್ರೀಗುರುರಾಯ
ಏಳು ಮನೆಯ ಹೊಕ್ಕು ಮೆರೆವನು ॥ ೫ ॥

ಹೆತ್ತ ತಾಯಿ ಮಗನ ನುಂಗೆ
ಸತ್ತ ಶಿಶುಯೆದ್ದು ತನ್ನ
ಹೆತ್ತತಾಯಿಯ ಹಿಡಿದು ನುಂಗಿತ್ತು । ಏ ಶ್ರೀಗುರುರಾಯ
ಮತ್ತೆ ಅಂಗೈ ಮೊಲೆಯ ನುಂಗಿತ್ತು ॥ ೬ ॥

ಹುಲಿಯ ಬೆನ್ನನೇರಿ ಎರಳೆ
ನಲಿದು ಮೆಯ್ದು ಬರುವುದು ಕಂಡೆ
ಜಲದೊಳಗ್ನಿ ಉರಿವುದು ಕಂಡೆ । ಏ ಶ್ರೀಗುರುರಾಯ
ತಲೆಯನಿಲ್ಲದೆ ಉಂಬವನ ಕಂಡೆ ॥ ೭ ॥

ಕೋಡಗವು ಆನೆ ಹೆಣವ
ನೋಡಿ ಮುದ್ದಾಡುವುದು ಕಂಡೆ
ಕಾಡಿನೊಳಗೆ ಸೂಳಿನ ಕಂಡೆ । ಏ ಶ್ರೀಗುರುರಾಯ
ಕೂಡಿದವರ ಕೊಲ್ಲುವುದು ಕಂಡೆ ॥ ೮ ॥

ಸರ್ಪಕಚ್ಚಿ ಸತ್ತಹೆಣನು
ಮುಪ್ಪುರಗಳ ಹೊಕ್ಕು ತಾನೆ
ತಪ್ಪದೆಲ್ಲ ಕೇರಿ ತಿರುಗುವುದು ಕಂಡೆ । ಏ ಶ್ರೀಗುರುರಾಯ
ಸರ್ಪ ಸತ್ತರೆ ಸುಮ್ಮನಿರುವುದು ಕಂಡೆ ॥ ೯ ॥

ಗಂಡ ತಾನು ಹುಟ್ಟದ ಮುನ್ನ
ಹೆಂಡತಿ ತಾ ಹುಟ್ಟಿದಳು

ಮಂಡಿವೊಳಗೆ ಗಂಡನ ಕೂಡಿದಳು । ಏ ಶ್ರೀಗುರುರಾಯ
ಗಂಡು ಮಗನ ಪಡೆದು ಸಾಕಿದಳು ॥ ೧೦ ॥

ನಿತ್ಯವಲ್ಲದೂರ ನಡುವೆ
ಸತ್ತಹೆಣನು ನಾರುತ್ತಿರಲು
ಮುತ್ತಿಕೊಂಡ ನಾಯಿಗಳ ಕಂಡೆ । ಏ ಶ್ರೀಗುರುರಾಯ
ಸತ್ತ ಹೆಣನು ನಗುವುದು ಕಂಡೆ ॥ ೧೧ ॥

ಮೂಲೆಯೊಳಗಿದ್ದ ಬೆಕ್ಕ
ಕೋಳಿಹುಂಜ ಸುಂಗುತ್ತಿರಲು
ಕೋಳಿಯೆದ್ದು ಕೂಗನಿಕ್ಕಿತ್ತು । ಏ ಶ್ರೀಗುರುರಾಯ
ಕಾಳು ಹರಿದು ಬೆಳಗು ಬಿದ್ದಿತ್ತು ॥ ೧೨ ॥

ಹುಟ್ಟಿದ ಕೂಸಿಂಗೆ ತಾಯಿ
ತೊಟ್ಟಿಲಿಟ್ಟು ತೂಗುತಿರಲು
ತೊಟ್ಟಿಲವ ಹರಿದು ಬಿದ್ದಿತು । ಏ ಶ್ರೀಗುರುರಾಯ
ಹುಟ್ಟಿದ ಶಿಶು ಬಟ್ಟಬಯಲಾಯ್ತು ॥ ೧೩ ॥

ಮೊಲೆಗಳಿಲ್ಲದಾಕಳಿಂಗೆ
ತಲೆಯೆ ಮೊಲೆಯಾಯಿತಯ್ಯ
ಮೊಲೆಯ ಹಾಲು ಸತ್ತು ಸವಿವಾತ । ಏ ಶ್ರೀಗುರುರಾಯ
ಬೆಲೆಯನಿಲ್ಲದ ಪುರುಷಜನಕಾತ ॥ ೧೪ ॥

ನಾನು ನೀನೆಂಬುಭಯ ಸಂಶಯ
ವೇನು ಇಲ್ಲದಂತಾಯಿತು
ಮಾನಿತ್ಯನೆಲೆ ಚೆನ್ನವೀರೇಶ । ಏ ಶ್ರೀಗುರುರಾಯ
ಜ್ಞಾನ ರತ್ನಾಕರ ನಿಶಾಧೀಶ ॥ ೧೫ ॥

೧೩

ದೇವನೊಬ್ಬನೆ ಮತ್ತಿನ್ನೆಲ್ಲಿ ನೋಡಿದರೆ
ಕೋವಿದರೆಲ್ಲ ತಿಳಿದುಕೊಳ್ಳುವುದಿನ್ನು ॥ ಧ್ರು ॥

ಸಸಿಯೊಬ್ಬನಾದರೆ ಸಲೀಲಗಳು ಬೇರೆ ಬೇರೆ
ಪಸರಿಸಿ ಜಗದೊಳು ಪರಿವುದಕೆ
ಒಸೆದು ಸಮಸ್ತಲೋಕ ವಿಸರವ ಪೊರೆವಂಥ
ಅಸಮಾಕ್ಷ ಶಿವನಂದಿಗಿಂದಿಗೊಬ್ಬನೆ ॥ ೧ ॥

ಮುಕುರವೊಂದಾದರೆ ಮುಖಗಳು ಬೇರೆ ಬೇರೆ
ಪ್ರಕಟಿತಾಕೃತಿಗಳು ಪ್ರೇಕ್ಷಿಸಲಿಕೆ
ನಿಖಿಲ ಜೀವಾತ್ಮರ ನಿಕರ ಪಾಲಿಸುವಂಥ
ಅಕಳಂಕ ಮೃಡನಂದಿಗಿಂದಿಗೊಬ್ಬನೆ ॥ ೨ ॥

ಗಗನವೊಂದಾದರೆ ಖಗಗಳು ಬೇರೆ ಬೇರೆ
ನೆಗೆದು ಲಂಘಿಸಿಪಾರಿ ನೆರೆವುದಕೆ
ಅಗಣಿತಜಾಂಡಗಳ ಮಿಗೆಯುದ್ಧರಿಸುವಂಥ
ಅಗಜಾಧಿಪತಿಯಂದಿಗಿಂದಿಗೊಬ್ಬನೆ ॥ ೩ ॥

ಸುರಚಾಪವೊಂದಾದರೆ ಸುರೂಪಗಳು ಬೇರೆ ಬೇರೆ
ಪರವೃಷ್ಟಿ ಸಂಜ್ಞಗಳೊರೆವುದಕೆ
ಧರಣಿ ಧಾನ್ಯಗಳೆಲ್ಲ ಪರಿವೃದ್ಧಿ ಮಾಡುವಂಥ
ಹರಸಾಂಬಮೂರ್ತಿಯಂದಿಗಿಂದಿಗೊಬ್ಬನೆ ॥ ೪ ॥

ದೀಪವೊಂದಾದರೆ ದೀಪ್ತಿಗಳು ಬೇರೆ ಬೇರೆ
ರೂಪಂಗಳಾಂತು ಜನರಿರುವುದಕೆ
ದೀಕ್ಷಿತೈನಿಲಯಾಧಿಪ ಚೆನ್ನವೀರೇಶ್ವರನು
ವ್ಯಾಪಕನಾಗಿಯಂದಿಗಿಂದಿಗೊಬ್ಬನೆ ॥ ೫ ॥

## ೧೪

ಮೃಡ ತವ ತಾಂಡವ
ಲೀಲಾಮಯ ತಾಂ ॥ ದ್ರು ॥

ಶತಧೃತಿ ಪ್ರಮುಖಮರನುತಪಾದ
ಜಿತರೇತನುಪಮ ಶ್ರೀದಂ ಥೋಂಧಿಮಿತಕ

ಘೋಂಧಿಮಿತಕ ಘೋಂಧಿಮಿತಕ
ತಾತಕಥಯ್ಯ ಲೀಲಾ ॥ ೧ ॥

ವಿಜಯಶರದಪುರ ವಿಜಯ ಶರದ ಭಾ
ನಿಜಕಂಧರ ಘನಶೋಭಾ
ಥಾಂತ ತ್ರಿಕಿಟ ಥಾಂತ ತ್ರಿಕಿಟ
ಥಾಂತತ್ರಿಕಿಟ ತಾತಕಥಯ್ಯ ಲೀಲಾ ॥ ೨ ॥

ಸುಲಲಿತ ಸುಖದೈನಿಲಯಪುರೇಂದ್ರ
ಸುಲಭ ಚೆನ್ನವೀರೇಂದ್ರ
ಧಿಂತನನ ಧಿಂತನನ
ಧಿಂತನನ ತಾತಕಥಯ್ಯ ಲೀಲಾ ॥ ೩ ॥

೧೫

ತಾಥಯ್ಯಥಯ್ಯಥಯ್ಯಾರೆ
ತತಕಿಟಥಯ್ಯಥಯ್ಯಾರೆ ॥ ಪ ॥

ಮಂಡಿತದಿವಿಜಮಂಡಲ ರಾಜ
ತಾಂಡವಮೂರ್ತಿ ವಿಲಾಸ ॥ ೧ ॥

ಕಿಟಧಿಮಿಕಿಟಥೋಂ ಗಿಟತರಿಕಿಟಥೋಂ
ಗಟ ತಕಿಟ ಧಿಮಿಕಿಟಥೋಂ ॥ ೨ ॥

ವಿಗತ ವಿದೋಷ ಭಗಣಪ ಪೂಷ
ನಗ ಭುಗ್ನೇತ್ರ ಸುಲಾಸ್ಯ ॥ ೩ ॥

ಘೋಂ ತಧಿಮಿತಕಿಟ ಧಾಂ ತತ್ತತ್ತತ್ತಕಿಟ
ಧೀ ತತಕಿಟ ಥೋಂ ಗಿಟ ತಧಿಮಿತಥೋಂ ॥ ೪ ॥

ವಿತತೈನಲೆ ಸಂಸ್ಥಿತ ಚೆನ್ನವೀರಾ
ದ್ಭುತ ತಾಂಡವಕಾಲೇ ಭಾಷೆ ॥ ೫ ॥

## ೧೬

ವನಜಜಾಂಡವಖಿಳವಳುಕಿ ಕಂಪಿಸುತಿರಲು
ಮನಸಿಜಾರಿ ಮುದದಿ ತಾಂಡವಾಟವೆಸಗಿದಂ || ಪ ||

ಮೃಡನು ಡಮರುಗಡಸಿ ಪಿಡಿದು
ನುಡಿಸೆ ಪೊಡವಿ ನಡುಗಲಗಜೆ
ಸೆಡೆದು ಎಡದ ಕಡೆಯ ಮೈಯ
ನಡರಿ ಅಡಗಲಡಿಯ ಧ್ವನಿಗೆ
ಜಡಜಜಾತನಳುಕಿ ಕೆಡೆದನು । ಗೀರ್ವಾಣರ್ಗೆ
ಜಡಧಿಶಯ್ಯ ಮೂರ್ಛೆವಡೆದನು
ಕಡಲಸುಡುವ ವಡಬಶಿಖಿಯ
ನಡುಗೆ ರಸ್ನಪೊಡಲಪೊತ್ತ
ಒಡಲಡಿಯನ ಪೆಡೆಯ ಮಿಡುಕೆ
ಪಿಡಿದು ನಗಗಳೊಡೆವುತಿರಲು || ೧ ||

ನೆಗೆದು ನಟಿಸೆ ಮುಗುಟಶಶಿಯು
ಸುಗಿದು ಕರಗೆ ಜಗುಳಿದಮೃತ
ಸೃಗುವಿಗಮರೆ ದಿವಿಜದನುಜ
ಮೊಗಗಳಸುವನೊಗೆದು ಕೂಗೆ
ದೃಗಶ್ರುತಿಗಳು ಭುಸ್ಸುಭುಸ್ಸೆನೆ । ತತ್ಪವನ ಪತಿಗೆ
ದೃಗದ ಶಿಖಿಯು ಕೆದರಿ ಘುಸ್ಸೆನೆ
ಮಿಗೆ ಜಡೆಗಳು ಪ್ರಘಟಿಸಲ್ಕೆ
ಗಗನದಿಗಾಧ ಭಗಣಮುದುರೆ
ಖಗಧ್ರುವಾದಿ ಪ್ರಗಣಮಳ್ಕಿ
ವಿಗತ ಬಲದಿ ಭುಗಿಲುಗೊಳಲು || ೨ ||

ತತಧಿಮಿ ಧಿಮಿ ತತಕಿಟೆಂಬ
ಗತಿಯ ತಿರುಪಿಗತನು ದಿಕ್ತ
ಟತಳ ವಿತಳವತಿ ದಿಶೇಭ
ಪ್ರತತಿಬೆದರೆ ಲೋಕ ಲೋಕ
ಕ್ಷಿತಿ ಭೃತದುರಿ ದಿತಿಜರಲುಗಲು । ಐನಿಲಯವಾಸ
ವಿತತವಿಜಯ ತಾಂಡವಾಡಲು
ಪ್ರತಿತ ಚೆನ್ನವೀರಣಾರ್ಯ

ನತುಳ ಪದದ ಗತಿಗಮಕಕೆ
ಯತಿತತಿ ಪ್ರಮಥಶಿಲಾದ
ಸುತ ಪ್ರಮುಖರು ನುತಿಸುತಿರಲು ॥ ೩ ॥

೧೭

ನಿನ್ನೊಳು ನಿರ್ಮಳವಾಗಿ
ನೀನಿದು ತಿಳಿಯಣ್ಣ ॥ ಪ್ರ ॥

ನೀನೆ ಕಿಂಕರನಾದರೆ ನಿನಗೆ
ನಿಖಿಲ ಜನರು ಕಿಂಕರರಣ್ಣ
ನೀನೆ ಗರ್ವಿಯಾಗಿದ್ದರೆ ಜಗದೊಳು
ನಿಖಿಳರು ಗರ್ವಿಗಳಣ್ಣ ॥ ೧ ॥

ನಾನೆ ಬಲ್ಲಿದನೆಂದರೆ ನೀನು
ನಳಿನಜನ ಮಗನೇನಣ್ಣ
ನಾನೆಂದುಬ್ಬುವ ನರನಿಗೆ
ಯಮಪುರ ನಾಯಕನರಕವಣ್ಣ ॥ ೨ ॥

ತನ್ನೊಳು ಕಪಟವನಿರ್ದರೆ ಧರೆಯೊಳು
ತನಗೆಲ್ಲರು ಕಪಟಿಗಳಣ್ಣ
ತನ್ನೊಳು ಹಿತವನು ಬಳಸಿದರಿಳೆಯೊಳು
ತನಗೆಲ್ಲರು ಹಿತರಣ್ಣ ॥ ೩ ॥

ಮೂರೆದಿವಸದ ಸಂತಿಯೆಂದು ನೀ
ಮುಖ್ಯವಿಚಾರಿಸಿ ನೋಡಣ್ಣ
ತೋರಿಯುಡಗುವ ಲೋಕವನರಿದು
ತೊಳಲುವುದಿನ್ಯಾಕಣ್ಣ ॥ ೪ ॥

ಗುರುತರ್‍ಯೆನೆಲೆಯ ಗುರುಚೆನ್ನವೀರನ
ಗುರುತುವಿಡಿದು ನೀನಡಿಯಣ್ಣ
ಅರಿಯದೆ ಭವದೊಳಗಳಿವ ಜೀವಿಗ
ಳನಂತ ಕೋಟಿಗಳಣ್ಣ ॥ ೫ ॥

೧೮

ದೇವರ ಮನದಿಚ್ಛೆಯಾಗುವುದು
ತನ್ನ ಮನದಿಚ್ಛೆಯಾಗದು ॥ ಧ್ರು ॥

ಹತವಾದಣ್ಣಗೆ ಪತಿಶಿರಸನು
ಹಚ್ಚೆಂಬುವುದು ತನ್ನಿಚ್ಛೆ
ಪತಿಮೊಗವಣ್ಣಗೆ ಅಣ್ಣನ ಮುಖವನು
ಪತಿಗಿಡುವುದು ಶಿವನಿಚ್ಛೆ ॥ ೧ ॥

ಪಿತ ಸಹೋದರರನು ಜನನೀಕನ್ನೆಯ
ಪರಿಣಯಕೀವುದು ತಮ್ಮಿಚ್ಛೆ
ಅತಿ[?] ಗೆ ಧಾರೆಯರರಸಿ
ತಾನಾದರಿಪ್ಪದು ಶಿವನಿಚ್ಛೆ ॥ ೨ ॥

ತಪಿಸುವಗ್ನಿಯೊಳು ಪುರುಷಗೋಸ್ಕರ
ತಪವ ಮಾಡುವುದು ತನ್ನಿಚ್ಛೆ
ಚಪಲದಿ ಅಡಿಯುಲ್ಲದವನ ಕೊಟ್ಟು
ಚರಿಸೆಂಬುದು ಶಿವನಿಚ್ಛೆ ॥ ೩ ॥

ಯತಿಕುಲವರ್ಯನು ಸತಿಯರ ಬಿಟ್ಟು
ಯೋಗದೊಳಿರುವುದು ತನ್ನಿಚ್ಛೆ
ಕೃತಕ ಶೂಲದಿ ಕೊರಗಿಸಿ ಮೋಕ್ಷವ
[ಕರುಣಿಸದಿರುವುದು] ಶಿವನಿಚ್ಛೆ ॥ ೪ ॥

ವರದೈಸಲಪುರವರ ಚೆನ್ನವೀರನ
ಒಲಿಸುವೆನೆಂಬುವುದು ತನ್ನಿಚ್ಛೆ
ಅರುಹು ಮರಹುಗಳನಷ್ಟವಿಟ್ಟು
ಜಗವಾಡಿಸುವುದು ಶಿವನಿಚ್ಛೆ ॥ ೫ ॥

೧೯

ದೇವರು ಮಾಡಿದ್ದೆಲ್ಲಾಗುವುದು
ಥಾವತಿಯಿಂದೇನಾಗದು ॥ ಧ್ರು ॥

ದೇವರು ಕೊಟ್ಟರೆ ಹೇಮದುಪ್ಪರಿಗೆ
ದಿವ್ಯಮಂದಿರದೊಳಿರಬೇಕು
ದೇವರು ಕೊಡದಿರೆ ದಿಕ್ಕಿಲ್ಲದೆ
ಹಾಳುದೇಗುಲ ಸೇರಿರಬೇಕು ॥ ೧ ॥

ದೇವರು ಕೊಟ್ಟರೆ ದಂತಿತುರಗ
ಅಂದಳಗಳೇರಿ ಮೆರೆಯಲಿಬೇಕು
ದೇವರು ಕೊಡದಿರೆ ಬರಿಗಾಲುಗಳಲಿ
ದಾರಿಗಳನು ನಡಿಬೇಕು ॥ ೨ ॥

ದೇವರು ಕೊಟ್ಟರೆ ಪಂಚಭಕ್ಷ ಘೃತ
ದೇವಾನ್ನಗಳುಂಡಿರಬೇಕು
ದೇವರು ಕೊಡದಿರೆ
ತಿರಿದನ್ನವನುಂಡಿರಬೇಕು ॥ ೩ ॥

ದೇವರು ಕೊಟ್ಟರೆ ದಟ್ಟಿಸವಾಂಬರ
ದಿವ್ಯದಾಭರಣವಿಡಬೇಕು
ದೇವರು ಕೊಡದಿರೆ ದೀನನಾಗಿ
ಪರಿದರವೆಗಳನುಡಬೇಕು ॥ ೪ ॥

ವಿಲಸಿತೈನಿಲಯ ಚೆನ್ನವೀರನು
ಇರಿಸಿದಂತೆ ತಾನಿರಬೇಕು
ಪಲವು ಮನುಜರನು ಹಾರೈಸುತೆ
ಬಹು ಹಲುಬುವುದೇತಕೆಬೇಕು ॥ ೫ ॥

೨೦

ನಿಷ್ಠರಿಗೆ ಬಹು ಕಷ್ಟವಾಯಿತು
ಕನಿಷ್ಠರಿಗೆ ಬಹುಸುಖವಾಯಿತು । ಶಿವ
ಶಿಷ್ಟರಿಗೆ ವ್ಯಾಕುಲವಾಯಿತು ಬಹು
ದುಷ್ಟರಿಗೆ ಫಲವಾಯಿತು ಶಿವಶಿವ ॥ ಪ ॥

ಆಚಾರವನುಳ್ಳವರಿಗೆ ವಿಘ್ನ
ವಧಿಕವಾಗಿ ಕಾಡುವದಾಯಿತು
ಆಚಾರವಬಿಟ್ಟವರಿಗೆ ಧರೆಯೊಳ
ಗೈಶ್ವರ್ಯ ತಾನಾಯಿತು ॥ ೧ ॥

ಬುದ್ಧಿವಂತರಿಗೆ ಬುಧರಿಗೆ ಸುಖ ಸ
ಮೃದ್ಧಿಯಡಗಿ ರುಜವಡಸಿತು
ಬುದ್ಧಿಹೀನರಿಗೆ ಬಹುಕೋಪಿಗಳಿಗೆ
ಭೂರಿ ಭಾಗ್ಯವಡಸಿತು ॥ ೨ ॥

ಜಾರಚೋರರಿಗೆ ಜಾತಿಭ್ರಷ್ಟರಿಗೆ
ಜಯಸಂಪದವನು ಹೆಚ್ಚಿತು
ಸಾರಸುಜನರಿಗೆ ಸೌಮ್ಯಹೃದಯರಿಗೆ
ಸಂಕಟವನು ಹೆಚ್ಚಿತು ॥ ೩ ॥

ಮದ್ಯಪಾನರಿಗೆ ಮಾಂಸಪ್ರಿಯರಿಗೆ
ಮಾನವ ಮಾಡುವದಾಯಿತು
ವಿದ್ಯಾವಂತರಿಗೆ ವಿಮಲಶಾಂತರಿಗೆ
ವಿರಸವ ಮಾಡುವದಾಯಿತು ॥ ೪ ॥

ಕಲಿಯಮಹಿಮವೊ ಕರ್ಮದಭಾರವೊ
ಖಲರ ದೈವವೊ ವೇದಿಸದೋ
ವಿಲಸದ್ಯನಿಲಯವಿಭು ಗುರು ಚೆನ್ನ
ವೀರೇಶನ ಬಗೆ ಯಾವುದೋ ॥ ೫ ॥

೨೧

ನೀ ಬರಿದೆ ಬಹುದಿನಗಳದಿ
ಅರಿಯದೆ ವ್ಯರ್ಥ ವ್ಯಾಕುಳದಿ ॥ ಪ ॥

ಮೂರು ದಿನದ ಸಂಸಾರ ಕನಸಿನಾ
ಕಾರವೆಂಬುದು ನೀನು [ತಿಳಿದು]

ಸಾರ ಕೈವಲ್ಯದ ದಾರಿ ಹಿಡಿಯದೆ ಕಾಂ
ತಾರ ಮರವಿನೊಳು ಸುಳಿದಿ ॥ ೧ ॥

ಲಲನೆ ಸುತರು ನಿನ್ನ ತೊಲಗಿದರೆಂದು ಬಹಳ
ಹಲುಬುತ ಶೋಕದಿಂದಳಿದಿ
ನೆಲದ ಮೇಲಿನ ಬಂಡೆ ತಲೆಮೇಲೆ ಹೊತ್ತಂತೆ
ಹಲವು ಚಿಂತೆಗಳನೆ ತಾಳಿದಿ ॥ ೨ ॥

ನಿನ್ನೊಳಗಿಹ ವಸ್ತು ಚೆನ್ನಾಗಿ ಬೆರೆದರೆ
ಇನ್ನುಳಿದುಪಟಳವಳಿದಿ
ಸನ್ನುತೈನಿಲಯ ಚೆನ್ನವೀರೇಂದ್ರನ
ಸನ್ನಳಿನಾರ್ಚಿಸೆ ಬೆಳದಿ ॥ ೩ ॥

೨೨

ಏಕೆ ಬಳಲುತಿದ್ದೆ ಮನವೆ ಬ[೧]
ದೇ[೧]ಕೆ ಚಿಂತೆಬಡುವೆ ಮನವೆ .
ಲೋಕದೊಡೆಯ ತಾನೆ ಕಡಿಹಾಯಿಸುವ
ನೇಕಭಾವದಿ ಭಜಿಸೆ ಮನವೆ ॥ ಪ ॥

ಕೊಟ್ಟು ಹುಟ್ಟಲಿಲ್ಲ ಮನವೆ ಬಾ[೨][ಯಿ][೨]
ಬಿಟ್ಟರೇಂ ಬಾಹುದೆಲೆ ಮನವೆ
ಎಷ್ಟು ನಿನ್ನ ಅದೃಷ್ಟದೊಳಗೆ ಬರೆ
ದಷ್ಟು ಬಾಹುದೆಲೆ ಮನವೆ ॥ ೧ ॥

ಎಂದಿಗಿದ್ದರೆ ಏ ಮನವೆ
ಬಂದಂತೆ ಹೋಗು ಏ ಮನವೆ
ಬಂದ ಮಾರ್ಗ ಪಲ್ಲದರ? ಬಿಡುವುದು
ಒಂದು ನುಡಿಯದಿರೆ ಮನವೆ ॥ ೨ ॥

೧-೧ ಬರುದೇಕೆ
೨-೨ ಬಾಯ

ಕಟ್ಟದೊಲ್ಲನೆಂದರೆ ಮನವೆ ಅದು
ಬಿಟ್ಟಿಥ್ಯಾಂಗೆ ನಿನ್ನನೆ ಮನವೆ
ಗಟ್ಟ್ಯಾಗಿ ಶರಗಿಲಿ ಕಟ್ಟಿಕೊಂಡ ಫಲ
ಮುಟ್ಟಿ ಉಣಲಿಬೇಕ [ಮನವೆ] ॥ ೩ ॥

ಸತ್ತು ಹೋದ ಮೇಲ ದೇಹ
ಎತ್ತ ಬೀಳುವದ [ಮನವೆ]
ಮೃತ್ಯುಗಂಜದ ಕರ್ತೃ ಗುರುವಿನ
ನಿತ್ಯ ಬಿಡದೆ ಭಜಿಸು [ಮನವೆ] ॥ ೪ ॥

ದೇಶದೊಳ್ಳನೆಲೆಯ ಮನವೆ ನಿಜ
ವಾಸವದು ನೋಡ[ಲ] ಮನವೆ
ದೋಷರಹಿತ ಗುರು ಚೆನ್ನವೀರೇಶನ
ಧ್ಯಾಸದೊಳಿರು ಕಂಡ್ಯ ಮನವೆ ॥ ೫ ॥

೨೩

ಮೂರೆ ದಿನದ ಸಂಸಾರವೋ
ಮೂಢ ಕೇಳೊ ॥ ಪ ॥

ಯಾರ ಭಾಗ್ಯವಿದು ಯಾರ ಮಂದಿರ
ಯಾರ ಬಂಧುಬಳಗೇರು ಸುಂದರ
ನಾರಿ ಮಕ್ಕಳಿವರು ಅಸ್ಥಿರ
ನೀರಗುರುಳಿ ತಾನಿರುವಪ್ರಕಾರ ॥ ೧ ॥

ಭೂಮಿ ಮೇಲೆ ಬಹುವೇಷ ತಂದಿ
ಕಾಮಿಸಿ ನೀ ತಿರುತಿರುಗಿ ಬಂದಿ
ತಾಮಸ ತಾಪತ್ರಯದೊಳು ನೊಂದಿ
ಸ್ವಾಮಿ ಮೆಚ್ಚಿದಂದಿಗೆ ನೀ ನಿಂದಿ ॥ ೨ ॥

ನಿನ್ನ ಹಡೆದವರಳಿವುವರಿಲ್ಲಿ
ನಿನ್ನ ಪುತ್ರರಳಿವುದು ನೀ ಬಲ್ಲಿ

ನನ್ನ ಪಾಡೇನೆಂದಾತ್ಮದಲ್ಲಿ
ನಿನ್ನೊಳಗೆ ನೀ ತಿಳಿಯಲೊಲ್ಲಿ ॥ ೩ ॥

ಹಾನಿವೃದ್ಧಿ ಬಹುಲಾಭಗಳೆಲ್ಲ
ಏನಾದರು ಬಾರದೆ ಬಿಡವಲ್ಲ
ನೀನಾಗಿ ಬಯಸಿದರೇನಿಲ್ಲ
ಮಾನವನೆ ಚಿಂತಿಸುವುದಲ್ಲ ॥ ೪ ॥

ಪರಮೈನಿಲಯನ ಪ್ರಾರ್ಥನೆ ಮಾಡೊ
ಪರಿಭವಮೂಲವ ಕೀಳ್ದುವೀಡಾಡೊ
ವರಗುರು ಚೆನ್ನವೀರೇಶನ ನೋಡೊ
ಗುರುತುವಿಟ್ಟು ನಿಜ ಬ್ರಹ್ಮದಿ ಕೂಡೊ ॥ ೫ ॥

೨೪

ಭಾವವಿಲ್ಲದವನು ಭವ್ಯನೆನಿಸನು
ಭಾವಜಾಂತಕನಂಘ್ರಿ ಭಜಿಸಿದರೇನು ॥ ಪ ॥

ಆನೆ ಅರಣ್ಯದೊಳಗಡಸಿರದೇನು
ಶ್ವಾನ ಬೂದಿಯೊಳಗೆ ಶಯನಿಸಿರದೇನು
ಮೀನು ನೀರೊಳು ಮುಳುಗಿ ಮಿಂದಿರದೇನು
ಧ್ಯಾನದಿಂ ಬಕವು ನದಿಯ ದಡದಲ್ಲಿರದೇನು ॥ ೧ ॥

ಸೋಗೆ ನಿರ್ವಿಷಯದಿಂದೆ ಸಂಚರಿಸದೇನು
ತೂಗಿ ಬಾವುಲಿ ತಲೆ ಕೆಳಗಿರದೇನು
ಗೂಗಿ ಕಣ್ಣುಗಳ ಮುಚ್ಚಿ ಗುಹದಲ್ಲಿರದೇನು
ಕೂಗಿ ಕಾಲಜ್ಞನಾಗಿ ಕೋಳಿಯಿರದೇನು ॥ ೨ ॥

ಇಂತು ಜಂತುಗಳಿಳೆಯೊಳಿರ್ದು ಫಲವೇನು
ಅಂತರಂಗವು ಶುದ್ಧವಾಗದನಕ
ಸಂತತೈನಿಲಯದೊಳು ಸೇರಿಕೊಂಡಾತನು
ಶಾಂತ ಗುರು ಚೆನ್ನವೀರೇಶನು ತಾನಾಗುವನು ॥ ೩ ॥

೨೫

ಸುಮ್ಮನೆ ದೊರಕುವುದೆ ಶಿವಪದ
ಹಮ್ಮನುಳಿದು ನಿಜಬ್ರಹ್ಮವ ತಿಳಿಯದೆ ॥ ಪ ॥

ಮೇದಿನಿಭೋಗವ ಛೇದಿಸಿ ಮುದ್ರೆಯ
ಸಾಧಿಸಿ ಮೆರೆವ ಸುನಾದವ ಕೇಳದೆ ॥ ೧ ॥

ಅಕುಟಿಲಾತ್ಮದಿಂ ಭೃಕುಟಿಯ ಮಧ್ಯದಿ
ಪ್ರಕಟಿಪ ಜ್ಯೋತಿಯ ನಿಕಟದಿ ಬೆರೆಯದೆ ॥ ೨ ॥

ಕಪ್ಪಿನ ಮೇಘದೊಳಿಪ್ಪ ಚಿದಾಕರ
ದುಪ್ಪರಿಗೆ ಕಣ್ಣುರೆಪ್ಪೆಯ ನಿಲಿಸದೆ ॥ ೩ ॥

ಥಳಥಳಿಸುವ ನಿರ್ಮಳಚಿತ್ಕಳೆಯೊಳು
ವಳಗಳಸುತ್ತಲು ಸುಳಿಸುಳಿದಾಡದೆ ॥ ೪ ॥

ವರದೈನೆಲೆಪುರವರ ಚೆನ್ನವೀರೇ
ಶ್ವರನೊಳು ಸುರುಚಿರ ಕರುಣವ ಪಡೆಯದೆ ॥ ೫ ॥

೨೬

ಸ್ಮರಿಸೊ ಶಿವಸಾಂಬನಾಮ ಮನದಿ ತಿಳಿದು ಸತತಂ
ಬೆರಿಸೊ ನಿಜಭಾವ ಸಾಧುಸಂಗದಲಿ ನಿರುತಂ ॥ ಪ ॥

ಸತಿಸುತಾದಿ ಸೌಖ್ಯಭೋಗ ಸಟೆ[1]ಯೆಂದೀಡಾಡೊ
ಅತುಳ ಮಹಾನಂದಪದದೊಳಂತರಿಸದೆ ಕೂಡೊ ॥ ೧ ॥

ನಾಮ ರೂಪು ಕ್ರಿಯೆವಿದೆಂದು ನಚ್ಚಿಕೆಡಲಿಬೇಡೊ
ಕಾಮ ದ್ರವ್ಯ ಗಾಳಿಗಿಟ್ಟ ದೀಪದಂತೆ ನೋಡೊ ॥ ೨ ॥

---

೧. ಹುಸಿ

ಪೃಥುಲ ಸುಖಕರೈನಿಲಯನ ಧ್ಯಾನಪಥದೊಳಾಡೊ
ಪ್ರಥಿತ ಚೆನ್ನವೀರಣಾರ್ಯನೊಲಿಸಿ ವರವ ಬೇಡೊ ॥ ೩ ॥

೨೭

ಶಿವಮಂತ್ರವ ಜಪಿಸೊ ಮಾನವ
ಭವಮಾಲೆಯ ಕ್ಷಯಿಸೊ ಮಾನವ ॥ ಪ ॥

ತನು ನೆಚ್ಚಲಿಬೇಡೊ ಮಾನವ
ಘನಪಾಪದಗೂಡೊ ಮಾನವ
ಧನ ಸಂಪದ ಬಿಡೊ ಮಾನವ
ಕನಸಿನ ಪರಿ ನೋಡೊ ಮಾನವ ॥ ೧ ॥

ರಸಸಂಸಾರ ಹುಸಿಯೊ ಮಾನವ
ಅಸಮಾತುರ ಬೆಸಿಯೊ ಮಾನವ
ವ್ಯಸನಾಂಕುರ ದಸಿಯೊ ಮಾನವ
ಮಿಸುಕಲೀಯವು ಸಸಿಯೊ ಮಾನವ ॥ ೨ ॥

ಹಿಡಿ ಸಾಧುರಮಾರ್ಗವೊ ಮಾನವ
ಕಡಿ ಖಲಸಂಸರ್ಗವೊ ಮಾನವ
ತಡಿ[1] ಷಡ್ವರ್ಗವೊ ಮಾನವ
ಪಡಿ ನೀನಪವರ್ಗವೊ ಮಾನವ ॥ ೩ ॥

ಕಳವಳ ಮಾಯಮರವೊ ಮಾನವ
ಕಳೆದುಳಿವರೆ ಸ್ಥಿರವೊ ಮಾನವ
ಉಳಿದರ್ಥಗಳೆರವೊ ಮಾನವ
ತಿಳಿಯಾನಂದದಿರವೊ ಮಾನವ ॥ ೪ ॥

ವರದ್ವೈನೆಲೆವರನೆ ಮಾನವ
ಗುರು ಚೆನ್ನವೀರನೆ ಮಾನವ
ಕರಮನದೊಳು ತಾನೆ ಮಾನವ
ಬೆರೆದಿಹ ನೋಡೊ ಮಾನವ ॥ ೫ ॥

೧. ತಡಿಯಿರಿ

## ೨೮

ವೇದವನೋದದ ವಿಪ್ರನು ಜಗದೊಳು ಕೆಡುವನಾವಗಂ
ಮೇದಿನಿಪತಿ ದುರ್ಮಂತ್ರಿಯ ದೆಸೆಯಿಂದೆ ಕೆಡುವನಾವಗಂ ॥ ಪ ॥

ಆ ಮಹೈಶ್ವರ್ಯಮನಯದ ದೆಸೆಯಿಂದೆ ಕೆಡುವುದಾವಗಂ
ಶಾಮಚರಕರ್ಮ ಸಾಧಕನಂಗವು ಕೆಡುವುದಾವಗಂ
ಕಾಮಿನಿಯರ ಭೋಗ ಕಾ[illegible] [illegible]ಗಿ ಕೆಡುವನಾವಗಂ
ಪ್ರೇಮದ ಲಾಲನಪ್ರಿಯ[illegible] [illegible] ಕೆಡು[illegible]ವಗಂ ॥ ೧ ॥

ಆರಂಭವನು ನೋಡಿ ಅಡಸದಿಪ್ಪಡೆ [illegible] ಕೆಡುವುದಾವಗಂ
ಸೇರದ ಧೂರ್ತನ ಸೇವೆಯಿಂ ಕುಲವನು [illegible]ವಗಂ
ಸಾರಮಿತ್ರತ್ವಮಸ್ನೇಹದ ದೆಸೆಯಿಂದೆ ಕೆಡುವುದಾವಗಂ
ಪಾರವಿಲ್ಲದರ್ಥಮಪಾತ್ರ ದಾನದಿಂದೆ ಕೆಡುವುದಾವಗಂ ॥ ೨ ॥

ಪಂಡಿತಕವಿಗಳ ಪಳಿವ ನಿಂದಕನು ಕೆಡುವನಾವಗಂ
ಮಂಡಿತ ಮಾನ್ಯರ ಮಾನವ ಕೊಂಬುವನು ಕೆಡುವನಾವಗಂ
ಚಂಡಕೋಪಿಯಾಗಿ ಚರಿಸುವ ಖಳನು ಕೆಡುವನಾವಗಂ
ಭಂಡಿಗಿಕ್ಕಿ ಪರರ ಬಾಧಿಸುವಧಮನು ಕೆಡುವನಾವಗಂ ॥ ೩ ॥

ಭೂರಮಣನ ಕೂಡೆ ಬಿಂಕದಿಂದಿರ್ದವನು ಕೆಡುವನಾವಗಂ
ಕ್ರೂರನ ಸಂಗದಿಂದ ಕೂಡಿ ನಡೆದವನು ಕೆಡುವನಾವಗಂ
ವಾರವಧುವಿನೊಳು ಒಲಿದು ಮಾನವನು ಕೆಡುವನಾವಗಂ
ಗಾರುಮಾಡುತೆ ಬಹುಗರ್ವಿಯಾದವನು ಕೆಡುವನಾವಗಂ ॥ ೪ ॥

ಬುಧರ ಬಿಟ್ಟು ದುರ್ಬೋಧೆಗಾದವನು ಕೆಡುವನಾವಗಂ
ಸದರ ಬಿಟ್ಟ ಅರಸನು ಸದನ ಸೇರಿದರೆ ಕೆಡುವನಾವಗಂ
ಸದಮತ್ಯನಿಲಯಕೆ ಸೇರದವನು ತಾನು ಕೆಡುವನಾವಗಂ
ವಿದಿತ ಶ್ರೀಚೆನ್ನವೀರನ ಮರೆದವನು ಕೆಡುವನಾವಗಂ

## ೨೯

ಸುಜನರಿಂದೆ ಬಹುಸುಖವಲ್ಲದೆ ದುಃಖವಾಗಬಲ್ಲದೆ
ಕುಜನರಿಂದೆ ವ್ಯಾಕುಲವಲ್ಲದೆ ಸುಖವಾಗಬಲ್ಲದೆ ॥ ಧ್ರು ॥

ಪರಿತೋಷದಿಂ ಪ್ರಜರ ಪಾಲಿಸುವನ ದೇಶವಗಲಬಲ್ಲದೆ
ಪರಿಪೀಡಿಸಿ ನರರಪಾಲಿಸುವನ ದೇಶ ನೆಗೆಯಲುಬಲ್ಲದೆ
ಪರಮಧರ್ಮಿಷ್ಟನ ಪಟ್ಟಣವನು ಕೆಟ್ಟುಹೋಗಬಲ್ಲದೆ
ಪರಮದುಷ್ಟನಾಳ್ವ ಪಟ್ಟಣವನು ಪುಷ್ಟಿಯಾಗಬಲ್ಲದೆ ॥ ೧ ॥

ಘನವಿಶಿಷ್ಟನಾಳ್ವ ಗ್ರಾಮವು ಕಷ್ಟದೊಳಿರಬಲ್ಲವೆ
ಘನಕನಿಷ್ಟನಾಳ್ವ ಗ್ರಾಮವು ತುಷ್ಟದೊಳಿರಬಲ್ಲದೆ
ಮನವುಳ್ಳವ ಮಾಳ್ಪ ಮನೆತನವು ಕೂಡಿ ಒಡೆಯಬಲ್ಲದೆ
ಮನಹೀನರು ಮಾಳ್ಪ ಮನೆತನವು ಕೂಡಿನಡೆಯಬಲ್ಲದೆ ॥ ೨ ॥

ಪಸಿಕೊಡದಿಂ ಹೊಳೆಯ ಹಾಯ್ವೆನೆನಲು ಪಾರವಾಗಬಲ್ಲದೆ
ಘೋಸಮನೆಯೊಳು ಗೂಗಿಹೊಕ್ಕು ಕೂಗಲು ಜಯವಾಗಬಲ್ಲದೆ
ಮಸಗಿ ಸರ್ಪವು ಒಳಮನೆಯ ಸೇರಲು ಕ್ಷೇಮವಾಗಬಲ್ಲದೆ
ಸುಶಿರದಮೇಲೋತಿ ಸುಳಿದೇರಲು ಶುಭವಾಗಬಲ್ಲದೆ ॥ ೩ ॥

ಕಂಬುಕರಗಿ ದಿವ್ಯಕನಕಕೆರೆಯಲೊಂದಾಗಬಲ್ಲದೆ
ಪಾಂಬು ಮಣ್ಣಿನೊಳುಹರಹಿ ಕೂಡಿಸಲೊಂದಾಗಬಲ್ಲದೆ
ಮಿಂಚು ಮೋಡಿನೊಳು ಮಿರುಗಲು ಪೂರೈಸಿ ಹೊಳೆಯಬಲ್ಲದೆ
ಕೆಂಬು ಮಹಾಕಾಳಕೆರಗಲು ಕಪ್ಪಿನಿಂದಳಿಯಬಲ್ಲದೆ ॥ ೪ ॥

ವಿದಿತಬ್ರಹ್ಮಜ್ಞಾನವಿದನಿಗೆ ಸೂತಕವಿರಲುಬಲ್ಲದೆ
ಪಡೆದ ಪರಮಹಂಸಫಲದಗೆ ಪಾತಕವಿರಲುಬಲ್ಲದೆ
ಸದಮಲ್ಯನೆಲೆಪುರಿಸದನಗೆ ಭವಮಾಲೆ ಇರಲುಬಲ್ಲದೆ
ವಿಧಿಯಾಜ್ಞೆ ಗುರುಚೆನ್ನವೀರನ ಭಕ್ತಗೆ ಬರಲುಬಲ್ಲದೆ ॥ ೫ ॥

೩೦

ದುರ್ಗುಣರಾಜನ ಧುರದೊಳು ಲೋಕವು ಬಾಳಬಲ್ಲದೆ
ನಿರ್ಗುಣಮಂತ್ರಿಯ ನಿಷ್ಠುರವನು ಜನ ತಾಳಬಲ್ಲುದೆ ॥ ಧ್ರು ॥

ಬೂಟಕನ ಬುದ್ಧಿ ಬುಧರ ಸದ್ಗೋಷ್ಟಿಗೆ ಹೆಚ್ಚಬಲ್ಲುದೆ
ಚಾಟಕನ ಚಿತ್ತ ಚತುರಕವಿಗಳಿಗೆ ಮೆಚ್ಚಬಲ್ಲದೆ

ಬೇಟಕನಾತ್ಮವು ಕೇಳಿವಿಲಾಸದೊಳಿರಲುಬಲ್ಲುದೆ
ಕಾಟಕನ ರುಪವು ಕಾರುಣ್ಯಭಾವದಿ ಬರಲುಬಲ್ಲದೆ ॥ ೧ ॥

ಕೊಲುವನ ಮನೆಹೊಕ್ಕ ಹೋತಿನಮರಿಯು ತಿರುಗಬಲ್ಲದೆ
ಕಲಿಯಮರೆಯೊಳು ಹೊಕ್ಕ ಕಷ್ಟಿಯಹೃದಯವು ಕೊರಗಬಲ್ಲದೆ
ಹುಲಿಗವಿಯೊಳು ಹೊಕ್ಕ ಹುಲ್ಲೆಯಮರಿಯು ದಕ್ಕಬಲ್ಲದೆ
ಮಲೆಹೊರೆಯೊಳು ಹೊಕ್ಕ ಮರಿಯಪೋತಕವು ಸಿಕ್ಕಬಲ್ಲದೆ ॥ ೨ ॥

ಸೂಳಿಬಾಣತಿಯ ಸುತನಿಗೆ ಪರಿಣಾಮ ತಟ್ಟಬಲ್ಲದೆ
ವಾಳಿಹೆಣ್ಣನಾಳ್ವ ವರನಿಗೆ ಪ್ರೇಮ ಹುಟ್ಟಬಲ್ಲದೆ
ತೇಳಿನಮರಿ ಪುಟ್ಟಿ ತೆರಳಿ ತಾಯಿಯಿಂದೆ ಬದುಕಬಲ್ಲದೆ
ಬಾಳಿ ಕೋಗಿಲಮರಿ ಬಳೆದು ಕಾಗಿಯಹಿಂಡು ಬೆದಕಬಲ್ಲದೆ ॥ ೩ ॥

ಬೆಲೆಯಹೆಣ್ಣಿನ ಕೂಡ ಬೆರೆದಿರುವನ ಧನವಲರಬಲ್ಲದೆ
ಕೆಲೆವಹೆಣ್ಣಿನ ಭೋಗಕೆಳಸಿದವನ ಮಾನಮಲರಬಲ್ಲದೆ
ಅಲೆವವೈರಿಯನು ಮನೆಯ ಸೇರಿಸಿದರೆ ಹಿತವಾಗಬಲ್ಲದೆ
ಮಲೆವ ದಾಯಾದ್ಯರ ಮೆಚ್ಚಿಸಿದರೆ ಮರ್ಮಹೋಗಬಲ್ಲದೆ ॥ ೪ ॥

ಕಾಮಿನಿಯರ ನೋಡಿ ಕಾಮಿಸಿ ಯತಿಮನ ಕರಗಬಲ್ಲದೆ
ಸಾಮಾನ್ಯರನು ನೋಡಿ ಸತ್ಪುರುಷನ ಭಾವವೆರಗಬಲ್ಲದೆ
ಧಾಮ್ಯನಿಲಯಧಾಮ ಶುಭವು ಖಳಗೆ ಬೆರೆಯಬಲ್ಲದೆ
ಆಮಹಾಚೆನ್ನವೀರಾರ್ಯಸಂಸ್ತು ಭವಿಗೆ ದೊರೆಯಬಲ್ಲದೆ ॥ ೫ ॥

೩೧

ವ್ರತವಿಲ್ಲದವನ ಭವನದಕಿಂತ ಕ್ರೂರವನವೆ ಲೇಸು
ಮತವಿಲ್ಲದವನ ಸಮ್ಮತಕಿಂತ ಮೂಢಮತವೆ ಲೇಸು ॥ ಧ್ರು ॥

ಬಲವಿಲ್ಲದವನ ಪೆರ್ಬಲದಕಿಂತ ನಿರ್ಬಲವೆ ಲೇಸು
ಕುಲವಿಲ್ಲದವನ ಸಂಕುಲದಕಿಂತ ಲಾಕುಲವೆ ಲೇಸು
ಹೊಲಬರಿಯದವನ ಹೊಣೆಯಗಿಂತ ಹುಲ್ಲಹೊರೆಯೆ ಲೇಸು
ಹಲುಬರಿಯದವನ ಹಕ್ಕಿಗಿಂತ ಹಾಲಾಹಲವೆ ಲೇಸು ॥ ೧ ॥

ತನಗಹಿತವಾದ ತನುವಿಗಿಂತ ವನದತರುವೆ ಲೇಸು
ತನಗಕ್ಕದ ಭಾಗ್ಯತನದಕಿಂತ ಬಡತನವೆ ಲೇಸು
ತನಗೆ ಹೊಂದಿರದ ವತನದಕಿಂತ ಭೃತ್ಯತನವೆ ಲೇಸು
ತನಗಲ್ಲದ ಮನೆತನದಕಿಂತ ಭಿಕ್ಷುಕತನವೆ ಲೇಸು ॥ ೨॥

ಜನಕನಿಗಾಗದ ತನುಜನಕಿಂತ ದಾಯಾದಿ[1]ಜನವೆ ಲೇಸು
ಜನಕೆ ಪೀಡಿಸುವ ದುರ್ಜನರಕಿಂತ ಸಾಧಜನವೆ ಲೇಸು
ಘನಪುಣ್ಯವಿಲ್ಲದಪಘನಕಿಂತ ಗ್ರಾವಘನವೆ ಲೇಸು
ಪುನಿತಕಾಗದ ಜನಪದಕಿಂತ ವನಪದವೆ ಲೇಸು ॥ ೩ ॥

ಅಳಿವಕಾಲಕೆ ಬರುವ ಅರಸುತನದಕಿಂತಲಗ್ನಿ ಲೇಸು
ಎಳೆವೆಣ್ಣು ವೃದ್ಧಗೆ ಎಳಸಿರುವುದಕಿಂತ ವ್ಯಾಧಿ ಲೇಸು
ಬೆಳೆವೊಣಗಿದ ಮೇಲೆ ಬೀಳುವ ಮಳೆಕಿಂತ ಬೇಗೆ ಲೇಸು
ಚಳಿಯಡಗಿದ ಮೇಲೆ ಥದವ ಪೊದೆವಕಿಂತ ಛಾಯೆಲೇಸು ॥ ೪ ॥

ತೊರೆದು ಪತಿವ್ರತೆಯ ತೊಲಗುವ ಪತಿಗಿಂತ ತೃಣವೆ ಲೇಸು
ಜರೆದು ನುಡಿವ ಸತಿಗಿಂತ ಮತಿಯುಳ್ಳ ಬೆಲೆವೆಣ್ಣೆ ಲೇಸು
ಪರಮೈನೆಲೆಪುರಿಯ ಪಳಿವ ನರನಿಗಿಂತ ಪಶುವೆ ಲೇಸು
ವರಚೆನ್ನವೀರನ ಪಾಲಿಸದ ಯತಿಗಿಂತ ವಟವೆ ಲೇಸು ॥ ೫ ॥

೩.೨

ವೀರಶೈವನು ತೋರುವಿತರ ದೈವಂಗಳಿಗೆರಗಬಲ್ಲನೆ
ವೀರಭಟನು ಮಹಾವಿಗ್ರಹಗಳಿಗಂಜಿ ತಿರುಗಬಲ್ಲನೆ ॥ ಧ್ರು ॥

ದಾನಶೂರನು ನಿರ್ಧನಿಕನಾದರೆ ಧರ್ಮ ಬಿಡಬಲ್ಲನೆ
ದೀನಮನದವನು ದೇಹಿಯೆಂದವರಿಗೆ ಕೊಡಬಲ್ಲನೆ
ಮಾನಿತಸುಜನನು ಮರ್ಮಜ್ಞರ ಮಾತು ಎಣಿಸಬಲ್ಲನೆ
ಹೀನ ಮಾನವ ಸಹಿತವಾಗಿ ಬುಧರಿಗೆ ತಣಿಸಬಲ್ಲನೆ ॥ ೧ ॥

೧. ದಾಯದ

ಧನವಬಲಿದ ಲೋಭಿ ದಾಯಾದಿಗಳನು ಬಗೆಯಬಲ್ಲನೆ
ಮಾನವಬಲಿದ ಯೋಗಿ ಮಾಯಾಪಾಶಗಳಿಗೆ ಸುಗಿಯಬಲ್ಲನೆ
ಮನವನಚ್ಚಿದವನು ಮಹನೀಯ ಜಗವನು ತೊಡಕಬಲ್ಲನೆ
ತನುವನಚ್ಚಿದವನು ತಪದ ಮಾರ್ಗವನು ತುಡುಕಬಲ್ಲನೆ ॥ ೨ ॥

ಮೃಗರಾಜನ ಪಿಡಿದು ಓಡುವವನು ಪುಲಿಗೆ ಬಳುಕಬಲ್ಲನೆ
ಖಗರಾಜನ ಪಿಡಿದು ಕಾಡುವವನು ಪರ್ದಿಗಳುಕಬಲ್ಲನೆ
ಗಗನಮಾರ್ಗದಿಂದೆ ಗಮಿಸುವವನು ನರರಿಗೆ ಹೆದರಬಲ್ಲನೆ
ಭಗಣಗಳು ಧರಿಸಿ ಬರುವವನು ನಿಶಿಗೆ ಬೆದರಬಲ್ಲನೆ ॥ ೩ ॥

ಸುಧೆಯ ಕೊಂಡಾತನು ಸುಳಿದು ಮರ್ತ್ಯರೊಳು ಬೆರಸಬಲ್ಲನೆ
ನಿಧಿಯಕಂಡಾತನು ನಿರ್ವಿತ್ತಕಷ್ಟದಿ ಚರಿಸಬಲ್ಲನೆ
ಪ್ರದರಸಂಗಾತನಪ್ರತಿಮ ಸೇನೆಗೆ ಸೋತುಹೋಗಬಲ್ಲನೆ
ಕುಧರಮಾಲೆಯನುಳ್ಳ ಕೊರಳಾತನು ಭರಕೆ ಬಾಗಬಲ್ಲನೆ ॥ ೪ ॥

ವೇದವಿದನು ಹೊಲ್ಲವಿದ್ಯೆಗಳನು ಕೊಂಡಾಡಬಲ್ಲನೆ
ಸಾಧು ಬ್ರಹ್ಮಜ್ಞನು ಸಮ್ಯಕ್‌ರುಚಿ ಹೊರಗಾಡಬಲ್ಲನೆ
ವೇದಘೋಟಕ ಚೆನ್ನವೀರಾರ್ಯನ ಆಜ್ಞಾನ್ನಿಯರಿಯಬಲ್ಲನೆ
ಶ್ರೀದೈನಿಲಯವ ಸೇರದವನು ಭರದಿ ಮೆರೆಯಬಲ್ಲನೆ ॥ ೫ ॥

೩೩

ಬಹುಮಾನಗಳ ಕೊಂಡುಬಾಳುವವನು ಜನಕೆ ಶೂಲವಲ್ಲವೆ
ಇಹಪರಗಳಿಗೆ ವಿರಹಿತನಾದವನು ಶೂಲವಲ್ಲವೆ ॥ ಪ ॥

ಭೂವರನಿಗೆ ಕೆಟ್ಟಬುದ್ಧಿ ಹೇಳುವವನು ಶೂಲವಲ್ಲವೆ
ಧಾವತಿಯರಿಯದ ಧಡ್ಡಮಗನು ಪಿತಗೆ ಶೂಲವಲ್ಲವೆ
ಚಾವಡಿಯೊಳು ಕುಳಿತು ಚಾಡಿಹೇಳುವವನು ಶೂಲವಲ್ಲವೆ
ಸಾವಾಸವನೆ ಮಾಡಿ ಸಂಕಟವಿಕ್ಕುವವನು ಶೂಲವಲ್ಲವೆ ॥ ೧ ॥

ಭಯವಡಸಿಟ್ಟು ಜನಕೆ ಬಾಧಿಸುವರಸನು ಶೂಲವಲ್ಲವೆ
ಜಯರಣದೊಳುನಿಂದು ಜರಗುವ ಕುದುರೆಯು ಶೂಲವಲ್ಲವೆ

ನಯಭಯಗಳ ಬಿಟ್ಟು ನಾಚದ ಸತಿಯಳು ಶೂಲವಲ್ಲವೆ
ವಯವಿರಲಿಕೆ ವರನವೊಲ್ಲದ ಮಗಳು ತಾ ಶೂಲವಲ್ಲವೆ ॥ ೨ ॥

ಮರೆಮೋಸವನೆ ಮಾಡಿ ಮದ್ದಿಕ್ಕುವ ನಾರಿ ಶೂಲವಲ್ಲವೆ
ವರನವೊಲಿಸಿಕೊಂಡ ಜಾರಸ್ತ್ರೀ ಸತಿಗೆ ಶೂಲವಲ್ಲವೆ
ಪರರಕೆಡಿಸಿ ಬಾಳ್ವ ಪಾಪಾತ್ಮನು ಮಹಾಶೂಲವಲ್ಲವೆ
ಸುರತದೊಳಗೆ ಕಾಡಿಸುಖಬಡಿಸದ ಹೆಣ್ಣು ಶೂಲವಲ್ಲವೆ ॥ ೩ ॥

ಕೊಳಕುಮನವನುಳ್ಳ ಕೋಪಿಷ್ಠ ಶಿಷ್ಯನು ಶೂಲವಲ್ಲವೆ
ಅಳುಕಿ ಸೇವೆಯ ಮಾಡದಾಳು ಧಣಿಯರಿಗೆ ಶೂಲವಲ್ಲವೆ
ಎಳಕಪೆಣ್ಣಿಗೆ ಮುಪ್ಪಿನೆರೆಯನಿರ್ದರೆ ಕೆಟ್ಟಶೂಲವಲ್ಲವೆ
ಬಳುಕದೆ ಅತ್ತೆಗೆ ಭಂಡುಗೆಲೆವ ಸೊಸೆ ಶೂಲವಲ್ಲವೆ ॥ ೪ ॥

ಕುಲಗಳ ಕೆಡಿಸುವ ಕುಜನನು ಲೋಕಕ್ಕೆ ಶೂಲವಲ್ಲವೆ
ಬೆಲೆಪೆಣ್ಣನೊಳಗಾಗಿ ಬೆರಸುವವನು ತಾನು ಶೂಲವಲ್ಲವೆ
ವಿಲಸಿತೈನಿಲಯಕೆ ವಿರಸವಾದವನಿನ್ನು ಶೂಲವಲ್ಲವೆ
ಅಲಘು ಚೆನ್ನವೀರೇಶನರ್ಚಿಸದಧಮನು ಶೂಲವಲ್ಲವೆ ॥ ೫ ॥

೩೪

ಅನ್ಯಾಯದಿಂದಾಳುವರಸನ ರಾಜ್ಯವು ಬಾಳ್ವುದೆಂತು
ಮಾನ್ಯವಿಲ್ಲದವನಾಳಿಕೆಯೊಳು ಸುಜನ ಬಾಳ್ವುದೆಂತು ॥ ಪ ॥

ಹೆತ್ತತಾಯಿಯೆ ಮಗನ ಹಿಸುಕುವೆನೆಂದರೆ ಬಾಳ್ವುದೆಂತು
ಬಿತ್ತಿದಹೊಲವನೆ ಬೇಲಿಯಮೆಯ್ದರೆ ಬಾಳ್ವುದೆಂತು
ಮುತ್ತಿದಮುನ್ನೀರು ಮೇರೆದಪ್ಪಿದರೆ ಬಾಳ್ವುದೆಂತು
ಬಿತ್ತರಾಗಸವನೆ ಬಿದ್ದರೆ ಜಗದೊಳು ಬಾಳ್ವುದೆಂತು ॥ ೧ ॥

ನಿಟ್ಟಿಸಿದರೆ ಕಿಚ್ಚು ನಿಜವಾಗಿಸುಟ್ಟರೆ ಬಾಳ್ವುದೆಂತು
ಅಟ್ಟಡಿಗೆಯನೆಲ್ಲವತಿ ವಿಷವಾದರೆ ಬಾಳ್ವುದೆಂತು
ನೆಟ್ಟನೆ ನಿಂದಿರ್ದ ನೆಲವನಿಳಿದರಿನ್ನು ಬಾಳ್ವುದೆಂತು
ಮುಟ್ಟಬೀಸುವಗಾಳಿ ಮೂಡದನಿಂದರ ಮುಂದೆ
ಬಾಳ್ವುದೆಂತು ॥ ೨ ॥

ಜಲಧರ ನಂಜಿನಜಲವನು ಸುರಿಯಲು ಬಾಳ್ವುದೆಂತು
ನೆಲದೊಳು ಬೀಜವು ನಾಟದೆಯಿರ್ದರೆ ಮತ್ತೆ ಬಾಳ್ವುದೆಂತು
ಪುಲಿಗೆ ಧೈರ್ಯಪುಟ್ಟಿ ಪುರದೊಳು ಪೊಕ್ಕರೆ ಬಾಳ್ವುದೆಂತು
ಸಲೆ ಹಗಲೊಳು ಭೂತ ಸಂಚರಿಸಿದರಿನ್ನು ಬಾಳ್ವುದೆಂತು ॥ ೩ ॥

ಕೊರಡಿರುಳೊಳು ವಾಯುಕೋಣೆಗೆ ಮೂಡಲು ಬಾಳ್ವುದೆಂತು (?)
ಕರಡಿಮೋರಿಯ ಕೆಂಪುಕಡವರಿಳೆಯೊಳು ಬಾಳ್ವುದೆಂತು (?)
ಉರುತಿಮಿಂಗಿಲವಿನ್ನು ಉದಧಿಬಿಟ್ಟಿರ್ದರೆ ಬಾಳ್ವುದೆಂತು
ಸುರುಚಿರಶಾಸ್ತ್ರನ ಸುಳಿವಿಲ್ಲದಿರೆ ಲೋಕ ಬಾಳ್ವುದೆಂತು ॥ ೪ ॥

ಅಖಿಳ ನಿರ್ಗತಂಗಳಡಸಿದರೀ ಲೋಕ ಬಾಳ್ವುದೆಂತು
ವಿಕಟಕಾಮನಬಿಲ್ಲುವಿಳಿದರೆ ಪ್ರಜರಿನ್ನು ಬಾಳ್ವುದೆಂತು
ಪ್ರಕಟಿತೈನಿಲಯಕೆ ಪರವಾಗಿರ್ದವರು ಬಾಳ್ವುದೆಂತು
ಅಕಳಂಕ ಚೆನ್ನವೀರಾರ್ಯನ ಪಳಿದವರು ಬಾಳ್ವುದೆಂತು ॥ ೫ ॥

೩೫

ಶಾಂತಿಯಿಲ್ಲದವನ ಶರಣತ್ವಮಿಳೆಯೊಳು ಶೋಭಿಸಿರ್ಪುದೆ
ಕಾಂತಿಯಿಲ್ಲದವನ ಕಾಯವು ಜನರೊಳು ಶೋಭಿಸಿರ್ಪುದೆ ॥ ಪ ॥

ಅಕ್ಷರವಿಲ್ಲದವನಾನನ ಸಭೆಯೊಳು ಶೋಭಿಸಿರ್ಪುದೆ
ಸುಕ್ಷೇಮವಿಲ್ಲದ ಸುಜನನ ಮನೆಯನು ಶೋಭಿಸಿರ್ಪುದೆ
ಲಕ್ಷಣವಿಲ್ಲದ ಲಲನೆಯಭೋಗವು ಶೋಭಿಸಿರ್ಪುದೆ
ಪಕ್ಷವನಿಲ್ಲದ ಪರಿಣಯಕಾರ್ಯವು ಶೋಭಿಸಿರ್ಪುದೆ ॥ ೧ ॥

ಹಗಲೊಳಿರ್ದ ಸಸಿಪ್ರಭೆಯನು ಜಗದೊಳು ಶೋಭಿಸಿರ್ಪುದೆ
ಹಗರಣಿಗನ ಮಾತು ಹಾಸ್ಯಕ್ಕಲ್ಲದೆ ಮತ್ತೆ ಶೋಭಿಸಿರ್ಪುದೆ
ಪೊಗರಜವ್ವನವನು ಪೋದಮೇಲೆ ಸತಿ ಶೋಭಿಸಿರ್ಪುದೆ
ಹಗೆಯ ಹಿತವನೆಚ್ಚಿ ಹಕ್ಕಿಯೊಳಿರಲದು ಶೋಭಿಸಿರ್ಪುದೆ ॥ ೨ ॥

ತನುಗುಣವಳಿಯದ ತಪಸಿಯವ್ರತವನು ಶೋಭಿಸಿರ್ಪುದೆ
ತನಗೆಪುಟ್ಟಿದ ಕೆಟ್ಟತನಯನಿಂದೆ ಕುಲವು ಶೋಭಿಸಿರ್ಪುದೆ

ಧನಲೋಭಿ ಮಾಡುವ ದಾನ ಮಾನ್ಯರೊಳು ಶೋಭಿಸಿರ್ಪುದೆ
ಜನಪಗೆ ದುರ್ಮಂತ್ರಿಜಾಲವಿರ್ದರೆ ರಾಜ್ಯ ಶೋಭಿಸಿರ್ಪುದೆ ॥ ೩ ॥

ಕಮಲಗಳಿಲ್ಲದ ಕಾಸಾರಮವನಿಗೆ ಶೋಭಿಸಿರ್ಪುದೆ
ಸುಮನಗಳಿಲ್ಲದೆ ಸೊಂಪಿಲಿರುವ ಬನವು ಶೋಭಿಸಿರ್ಪುದೆ
ವಿಮತರಿರ್ದ ಗ್ರಾಮವು ವಿಸ್ತಾರವಾಗಿನ್ನು ಶೋಭಿಸಿರ್ಪುದೆ
ಕುಮತರಿರ್ದ ಕ್ಷೇತ್ರ ಕುಶಲರ ದೃಷ್ಟಿಗೆ ಶೋಭಿಸಿರ್ಪುದೆ ॥ ೪ ॥

ದ್ರವ್ಯಾಧಿಪತಿಯ ಮುಂದೆ ಧಾನ್ಯದರಾಶಿಯು ಶೋಭಿಸಿರ್ಪುದೆ
ದಿವ್ಯಸೂರ್ಯನ ಮುಂದೆ ದಿವಿಜಾರಿಬಲವನು ಶೋಭಿಸಿರ್ಪುದೆ
ನವ್ಯ ಐನೆಲೆಪುರಿಯನಾಥನರಿಯದಾತ್ಮ ಶೋಭಿಸಿರ್ಪುದೆ
ಭವ್ಯಚೆನ್ನವೀರನ ಭಜಿಸದವನ ಜನ್ಮ ಶೋಭಿಸಿರ್ಪುದೆ ॥ ೫ ॥

## ೩೬

ವಿಜಿತವೀರ್ಯತ್ವವೆ ವಿಖ್ಯಾತಯೋಗಕ್ಕೆ ಬೀಜವಲ್ಲವೆ
ವೃಜಿನಾವಲಂಬವೆ ಉರ್ವಿಯಭೋಗಕ್ಕೆ ಬೀಜವಲ್ಲವೆ ॥ ಪ ॥

ಪರಹಿತಧರ್ಮವೆ ಪೃಥ್ವಿಐಶ್ವರ್ಯಕ್ಕೆ ಬೀಜವಲ್ಲವೆ
ಪರ[ಪೀಡನಾ][1]ರ್ಥವೆ ಪಟುತರ ವಿಘ್ನಕ್ಕೆ ಬೀಜವಲ್ಲವೆ
ಪರಹಿಂಸನವೆ ಪರಿಹೃತ ನರಕಕ್ಕೆ ಬೀಜವಲ್ಲವೆ
ಪರಮಸುಜ್ಞಾನವೆ ಪರತತ್ವ ಸಾಧ್ಯಕೆ ಬೀಜವಲ್ಲವೆ ॥ ೧ ॥

ಲಾವಣ್ಯವತಿಯಾದ ಲಲನೆಯೆ ಪಾಪಕ್ಕೆ ಬೀಜವಲ್ಲವೆ
ಜೀವನವೆನಿಸುವ ಜಲವೆ ರೋಗಕ್ಕೆ ಬೀಜವಲ್ಲವೆ
ಕೋಪಿಕೊಂಡಿರ್ದತಿಕೋಪವೆ ನಾಶಕ್ಕೆ ಬೀಜವಲ್ಲವೆ
ಧಾವಿಸುವ ಆಶೆಯೆ ಧಾರುಣಿಭವಕ್ಕೆ ಬೀಜವಲ್ಲವೆ ॥ ೨ ॥

ಅಪಮೃತ್ಯುಕರ್ಮವೆ ಅತಿಕಷ್ಟ ಜನ್ಮಕ್ಕೆ ಬೀಜವಲ್ಲವೆ
ಅಪರಾಧಕೃತ್ಯವೆ ಅಪಕೀರ್ತಿಗೆ ಮತ್ತೆ ಬೀಜವಲ್ಲವೆ

---

೧. ಪಿಧನಾ

ನಿಪುಣಗುಣಾಂಗವೆ ನಿರ್ಮಲವಿದ್ಯೆಗೆ ಬೀಜವಲ್ಲವೆ
ವಿಪುಲಧೈರ್ಯತ್ವವೆ ವೀರಸಾಧನಕ್ಕೆ ಬೀಜವಲ್ಲವೆ ॥ ೩ ॥

ಅಸಮಾನದೈವವೆ ಅತಿಸಂಪದಗಳಿಗೆ ಬೀಜವಲ್ಲವೆ
ಮಿಸುಗುವ ದ್ರವ್ಯವೆ ಮಿತಕಾರಣಗಳಿಗೆ ಬೀಜವಲ್ಲವೆ
ರಸದಿವ್ಯಾಂಗವೆ ರತಿಯುಳ್ಳರೇತಕ್ಕೆ ಬೀಜವಲ್ಲವೆ
ರಸಯುಕ್ತಕಾಮವೆ ರಚನೆಯಲೋಕಕ್ಕೆ ಬೀಜವಲ್ಲವೆ ॥ ೪ ॥

ಜಲನಿಧಿಯೆ ಸರ್ವ ಜಲಧರಂಗಳಿಗೆ ಬೀಜವಲ್ಲವೆ
ಕಲಕಲಧ್ವಾನವೆ ಕದನದ ರೌದ್ರಕ್ಕೆ ಬೀಜವಲ್ಲವೆ
ವಿಲಸಿತೈನಿಲಯವೆ ವೀರವ್ರತಿಗಳಿಗೆ ಬೀಜವಲ್ಲವೆ
ವಿಲಯರಹಿತ ಚೆನ್ನವೀರೇಂದ್ರ ಮೋಕ್ಷಕ್ಕೆ ಬೀಜವಲ್ಲವೆ ॥ ೫ ॥

೩೭

ಕಷ್ಟವಲ್ಲವೆ ಇದು ಬಹುತರ ಕಷ್ಟವಲ್ಲವೆ
ಸೃಷ್ಟಿಯೊಳು ಗುರುವಿನ ಭೃತ್ಯನಾಗಿರುವದಕ್ಕಿಂತ ಕಷ್ಟವಲ್ಲವೆ ॥ ಪ ॥

ಸಪ್ತ ವ್ಯಸನಗಳಿಂದೆ ತಪ್ತನಾಗಿರುವುದು ಕಷ್ಟವಲ್ಲವೆ
ಗುಪ್ತಪಾತಕರ ಗೃಹದೊಳಗಿರುವುದು ಕಷ್ಟವಲ್ಲವೆ
ಸಪ್ತಹಾನಿಯವನ ಸಂಗದೊಳಿರುವುದು ಕಷ್ಟವಲ್ಲವೆ
ತಪ್ತಭೂಮಿಯೊಳು ತನುವೆರಸಿರುವುದು ಕಷ್ಟವಲ್ಲವೆ ॥ ೧ ॥

ಅಪಹಾಸ್ಯಪಡಿಸೊಡನೆ ಉಸಿರುವುದು ಕಷ್ಟವಲ್ಲವೆ
ಕೃಪಣರ ಸೇವೆಯು ಕೂಡಿ ಮಾಡುವುದು ಕಷ್ಟವಲ್ಲವೆ
ಅಪರಾಧವನು ಮಾಡುವಧಮನೊಳಿರುವುದು ಕಷ್ಟವಲ್ಲವೆ
ನಿಪುಣನಲ್ಲದವನ ನೆರೆಯಲಿರುವುದು ಕಷ್ಟವಲ್ಲವೆ ॥ ೨ ॥

ದೂಷಣವನು ಮಾಳ್ಪ ದುಷ್ಟನೊಳಿರುವುದು ಕಷ್ಟವಲ್ಲವೆ
ಶೇಷನಿರುವಮನೆ ಸೇರಿಕೊಂಡಿರುವುದು ಕಷ್ಟವಲ್ಲವೆ
ಕ್ಲೇಶಬಡಿಸುವವನ ಕಲದೊಳು ಬಾಳ್ವುದು ಕಷ್ಟವಲ್ಲವೆ
ಕೋಶವಿಲ್ಲದವನ ಕೋಟೆಯೊಳಿರುವುದು ಕಷ್ಟವಲ್ಲವೆ ॥ ೩. ॥

ಪತಿವ್ರತವಿಲ್ಲದ ಪತ್ನಿಯನಾಳ್ವುದು ಕಷ್ಟವಲ್ಲವೆ
ಮತಿಹೀನನಿಗೆ ಪುಣ್ಯಮಾರ್ಗವು ಪೇಳ್ವುದು ಕಷ್ಟವಲ್ಲವೆ
ಮಿತವಮಿೂರಿದವನ ಮಿತ್ರತ್ವವು ಭಾಳ ಕಷ್ಟವಲ್ಲವೆ
ಗತಿಗೆಟ್ಟ ನೀಚನ ಗಣದೊಳಗಿರುವುದು ಕಷ್ಟವಲ್ಲವೆ ॥ ೪ ॥

ಅಭ್ರಮ ಧರ್ಮಗಳರಿಯದವನ ಹಿತ ಕಷ್ಟವಲ್ಲವೆ
ವಿಭ್ರಮವಿಲ್ಲದ ವಿಪರೀತನ ಬೋಧೆ ಕಷ್ಟವಲ್ಲವೆ
ಸುಭ್ರದ್ಯನಿಲಯ ಸೇರದವನಿಗತಿ ಕಷ್ಟವಲ್ಲವೆ
ಪ್ರಭೃತಿ ಗುರು ಚೆನ್ನವೀರನನರಿಯದವಗೆ ಕಷ್ಟವಲ್ಲವೆ ॥ ೫ ॥

೩೮

ನಿತ್ಯ ನಿರ್ಮಲ ಶಿವನ ನೆಚ್ಚಿರ್ದ ಸಲೆ ಮನವು
ಮರೆಯಬಲ್ಲುದೆ ತೊರೆದು ತಾನಿರಬಲ್ಲುದೆ ॥ ಪ ॥

ಆಚಾರವಿಲ್ಲದವನಂಗವು ಶುಚಿಯಾಗಿ ಇರಲುಬಲ್ಲದೆ
ನೀಚನ ನ್ಯಾಯವು ನಿರಘರ ಮನಸಿಗೆ ಬರಲುಬಲ್ಲದೆ
ವಾಚಾಳಕನ ದುಷ್ಟವಾಕ್ಯಗಳಿಗೆ ಜನ ಹೆಚ್ಚಬಲ್ಲದೆ
ನಾಚಿಕಿಲ್ಲದವನ ನಡತೆಗಳಿಗೆ ಲೋಕ ಮೆಚ್ಚಬಲ್ಲದೆ ॥ ೧ ॥

ಆನೆಯೇರಿಗ ಸಾಲವಾಳಾಗಿ ದುಡಿದರೆ ತೀರಬಲ್ಲದೆ
ಶ್ವಾನನುಳಿವನಿಗೈಶ್ವರ್ಯ ಬಂದರೆ ಬೆಲೆಯೇರಬಲ್ಲದೆ
ಸೂನೆಗಾಪನ ಮನೆ ಸುಟ್ಟರೆ ಜನವೆದ್ದು ಮಿಡುಕಬಲ್ಲದೆ
ಬೇನೆ ಬಿಡ್ವಾನೆದ್ದು ಬೇಡಿದ್ದುಂಡರೆ ರೋಗವಿಡುಕಬಲ್ಲದೆ ॥ ೨ ॥

ಜಾರಾಂಗನೆ ನರೆಜರೆಯಬಂದರೆ ಸುಮ್ಮನೆ ಹೋಗಬಲ್ಲದೆ
ಚೋರಗುಣ್ಯಸಂಗತಿ ಬೋಧಿಸಿದರೆ ಶಮನವಾಗಬಲ್ಲದೆ
ನೀರೊಳಗಣ ಕಲ್ಲು ನೆರೆ ನೆನೆದರೆ ತೆಳ್ಳಗಾಗಬಲ್ಲದೆ
ಕ್ಷೀರದೊಳಗಿಡಲು ಕೆಂಡದಿದ್ದಲಿ ಬೆಳ್ಳಗಾಗಬಲ್ಲದೆ ॥ ೩ ॥

ಜನಕೆ ಬುದ್ಧಿಯವಿಟ್ಟ ಜನಪಗೆ ಸೌಭಾಗ್ಯಹೊಂದಬಲ್ಲದೆ
ಮನಕೆ ಸಿಟ್ಟುಬಿಟ್ಟ ಮಾನವನಿಗೆ ಮೋಕ್ಷ ಹೊಂದಬಲ್ಲದೆ

ತನುಗುಣವಳಿಯದೆ ತತ್ತ್ವಮಾರ್ಗವನು ತಿಳಿಯಬಲ್ಲದೆ
ಅನುಮೋದವಿಲ್ಲದೆ ಎಳೆವೆಣ್ಣು ರತಿಯೊಳಗುಳಿಯಬಲ್ಲದೆ ॥ ೪ ॥

ಜಿತರೇತನಿಗೆ ಸರ್ವಜಿತ ಮದನಾಸ್ತ್ರವು ಕೆಡಿಸಬಲ್ಲದೆ
ವ್ರತಯುತನಿಗೆ ಮೋಹವಾಸನ ಬಲೆಯೊಡ್ಡಿಯಡಸಬಲ್ಲದೆ
ಪ್ರಥಿತೈನಿಲಯಕೆ ಪ್ರತಿಯಾಗಿ ಪರಸ್ಥಲವೆಸೆಯಬಲ್ಲದೆ
ವಿತತ ಶ್ರೀಗುರುಚೆನ್ನವೀರನಾಂಘ್ರಿಯು ಧೂರ್ತಗೆ
ಪಸೆಯಬಲ್ಲದೆ ॥ ೫ ॥

೩೯

ನಿಷ್ಠೆಯಿಲ್ಲದವನ ನೆಲೆಯಗಿಂತ ಹೊಲ್ಲನೆರಿಯೆ ಲೇಸು
ನಷ್ಟಬುದ್ಧಿಯನುಳ್ಳ ನರನಿಗಿಂತ ವಾನರವೆ ಲೇಸು ॥ ಪ ॥

ಅವಗುಣದರಸಿಯನಾಳುವುದಕಿಂತ ಅಡವಿ ಲೇಸು
ಸವಿಮಾತನಾಡದ ಸಖನಕಿಂತ ಹುಲ್ಲಸರವಿ ಲೇಸು
ವಿವರವಿಲ್ಲದವನ ವಿಶ್ವಾಸದಕಿಂತ ವಿಷವೆ ಲೇಸು
ತವಕಕ್ಕೊದಗದ ತರುಣಗಿಂತ ಶುಷ್ಕತರುವೆ ಲೇಸು ॥ ೧ ॥

ತನಗೆರವಹ ಮನೆತನದಕಿಂತಲಾಳುತನವೆ ಲೇಸು
ಧನವಿಲ್ಲದವನ ಸದನದಕಿಂತ ಬಂಧನವೆ ಲೇಸು
ಅನಹಿತನಹ ಸಭೆಯಲ್ಲಿರುವುದಕಿಂತಲಗ್ನಿ ಲೇಸು
ಸುನಯಾತ್ಮನಾಗದ ಸುತನಿಗಿಂತ ಮನೆಶುನಿಯೆ ಲೇಸು ॥ ೨ ॥

ಗಾರುಡನೃಪನ ನಗರದಕಿಂತ ಸಾಗರವೆ ಲೇಸು
ಹೋರಾಟಕಿಕ್ಕುವ ಹೊಣೆಗಾರನಿಗಿಂತ ಹೊಳೆಯೆ ಲೇಸು
ದಾರುಣಗುಣದ ಖುದ್ದನಿಗಿಂತ ಖಡ್ಗಧಾರಿ ಲೇಸು
ಗಾರುಮಾಡುವನ ಗರದಕಿಂತ ಸಂಗರವೆಲೇಸು ॥ ೩ ॥

ಮದ್ಯಪಾನಕನ ಮನೆಯಕಿಂತ ಹುಲಿಮನೆಯೆ ಲೇಸು
ವಿದ್ಯೆವಿಲ್ಲದವನ ವಿಧಿಯಕಿಂತ ಬಾಲವಿಧಿಯೆ ಲೇಸು
ಉದ್ಯೋಗವಿಲ್ಲದ ಊರಕಿಂತ ಕಾಡಿನುರಿಯೆ ಲೇಸು
ಗುದ್ದ್ಯಾಡುವ ಕೆಟ್ಟ ಜ್ಞಾತಿಕಿಂತ ಹಾಳುಗುಡಿಯೆ ಲೇಸು ॥ ೪ ॥

ಭಿನ್ನಭಾವಕನೊಳು ಬೆರೆದಿರುವುದಕಿಂತ ಬಿಲವೆ ಲೇಸು
ಮನ್ನಣೆಯಿಲ್ಲದವನ ಮದುವೆಕಿಂತ ಹೆಮ್ಮರವೆ ಲೇಸು

ಸನ್ನುತ್ಯನಿಲಯಕೆ ಸೇರದವನಿಗಿಂತ ಸಗಣಿ ಲೇಸು
ಚೆನ್ನವೀರ ನಿಮ್ಮ ಸ್ಮರಿಸದವನಿಗಿಂತ ಸದಿಯೆ ಲೇಸು ॥ ೫ ॥

೪೦

ಜಾತಿನಡತೆಗಳು ಜರಿದು ಬಿಟ್ಟವನನು ಕೂಡಬಾರದು
ನೀತಿವಂತನ ಕಂಡು ನಿಂದಿಸುವವನನು ನೋಡಬಾರದು ॥ ಪ ॥

ಪಾತಕಘಾತದೊಳಿರ್ದವನೊಡನೆ ಆಡಬಾರದು
ಮಾತರಿಯದ ಹುಚ್ಚಮನುಜನ ಸಂಗತಿ ಮಾಡಬಾರದು
ಭೀತಿ ದುರ್ಗುಣಗಳು ಬೀರುವ ಧೂರ್ತಗೆ ಬೇಡಬಾರದು
ಸೋತು ಪರರಮನೆ ಸೇರಿಕೊಂಡವನಿಗೆ ಕಾಡಬಾರದು ॥ ೧ ॥

ಕೆಟ್ಟಗುಣದಿ ಪರರ ಕೆಡಿಸುವವನ ಮಾತು ಕೇಳಬಾರದು
ಹೊಟ್ಟೆಹುರುಕನ ಮನೆಹೊರೆಯೊಳು ಸುಖವನು ಹೇಳಬಾರದು
ಕೊಟ್ಟವೃತ್ತಿ ಗುಡಿ ಗೋಪುರ ಮಠಗಳು ಕೀಳಬಾರದು
ಪಟ್ಟುಕುಡುಮನಾಳ್ವ ಪುರದೊಳು ಸುಜನರು ಬಾಳಬಾರದು ॥ ೨ ॥

ವ್ರತನೇಮಗಳ ಮಾಳ್ಪ ವರಯೋಗಿಗಳ ಕಂಡು ಹಳಿಯಬಾರದು
ಹಿತವನಾಚರಿಸುವ ಹಿರಿಯರ ಸ್ನೇಹವು ಕಳೆಯಬಾರದು
ಪತಿಭಕ್ತಿಯರ ಕಂಡು ಪರಮೋಹದಿ ಪಿಡಿದೆಳೆಯಬಾರದು
ಕೃತಕವ ಮಾಡುವ ಕ್ರೂರನ ಮನೆಯ ಮುಂದೆ ಸುಳಿಯ
ಬಾರದು ॥ ೩ ॥

ವಿಪುಲ ಪುಷ್ಪಫಲವಿರ್ದ ಮರಂಗಳು ಕಡಿಯಬಾರದು
ಕಪಟ ಕಲಹ ಕೂಟ ಕಂಡೆನೆಂದು ಸಾಕ್ಷಿ ನುಡಿಯಬಾರದು
ಅಪಕೀರ್ತಿವಂತನಾಶ್ರೈಸಿಕೊಂಡಿನ್ನು ನಡೆಯಬಾರದು
ವಿಪರೀತ ಕರ್ಮಿಷ್ಟನಿರ್ದ ದೇಶದೊಳು ತಡಿಯಬಾರದು ॥ ೪ ॥

ಮನ್ನಣೆಯಿಲ್ಲದ ಮಾನವನಿಕ್ಕಿಗೆ ಹೋಗಬಾರದು
ತನ್ನ ತಾನರಿಯದೆ ತನುರಕ್ಷಣೆಗೆ ತಲೆ ಬಾಗಬಾರದು
ಸನ್ನುತ್ಯನಿಲಯದ ಸಾಧುರಿಗನಹಿತನಾಗಬಾರದು
ಚೆನ್ನವೀರೇಶನ ಚರಣಸೇವೆಗಳು ನೀಗಬಾರದು ॥ ೫ ॥

೪೧

.....................................................

........................................................................ ॥ ಪ ॥

ಡಿಯನೆ ಬಿಟ್ಟು ಕರಿ

.....................................................

.....................................................

.....................................................

ಹಂಚು ಹಿಡಿವರೆ ಮರುಳುಮಾನವ ॥ ೧ ॥

ಕರ್ಪೂರದಬೇಲಿ ಕಳ್ಳಿಗಿಕ್ಕುವರೆ ಮರುಳು ಮಾನವ
ದರ್ಪಣಗಳೊಡೆದು ದಾರಿಗೆ ಹರಹುವರೆ ಮರುಳು ಮಾನವ
ಕೂಪರ ಕಳಕೊಂಡು ಕುಜನರೊಳಿರುವರೆ ಮರುಳುಮಾನವ
ಆರ್ಪರನೋಡಿಸಿ ಅಧಮನಾಳಾಗಿರುವರೆ ಮರುಳು ಮಾನವ ॥ ೨ ॥

ಮತಿವಂತರ ಬಿಟ್ಟು ಮದಡನ ಬೆರೆವರೆ ಮರುಳು ಮಾನವ
ಪತಿಭಕ್ತಿಯ ಬಿಟ್ಟು ಪಾಣ್ಬೆಯನಾಳ್ವರೆ ಮರುಳು ಮಾನವ
ಪಿತನ ನೂಕಿಸಿಕೊಟ್ಟು ಪಿಸುಣನ ಬಗೆವರೆ ಮರುಳುಮಾನವ
ವ್ರತಿಗಳ ನಿಂದಿಸಿ ಒರಟೆಯ ನುತಿಪರೆ ಮರುಳು ಮಾನವ ॥ ೩ ॥

ತಾಯಿಯ ಮಾರಿ ತೊತ್ತನುಕೊಂಡು ಬಾಳ್ವರೆ ಮರುಳು ಮಾನವ
ಪಾಯಸಾನ್ನವ ಬಿಟ್ಟು ಪಲವನುಣುವರೆ ಮರುಳು ಮಾನವ
ಕಾಯಸಿದ್ಧಿಯನುಳಿದು ಕಲುಷ ಸಾಧಿಸುವರೆ ಮರುಳುಮಾನವ
ನ್ಯಾಯವ ಬಿಟ್ಟನ್ಯಾಯದಿ ನಡೆವರೆ ಮರುಳು ಮಾನವ ॥ ೪ ॥

ಅನ್ಯದೈವಂಗಳನರ್ಚಿಸದಿರು ಕಂಡ್ಯ ಮರುಳು ಮಾನವ
ಬನ್ನಬಡುವ ಯಮಬಾಧೆ ತಪ್ಪದು ಕಂಡ್ಯ ಮರುಳು ಮಾನವ
ನನ್ನಿಯಿಂದೈನೆಲೆನಾಥನ ತಿಳಿ ಕಂಡ್ಯ ಮರುಳು ಮಾನವ
ಚೆನ್ನವೀರನಾಚಾರವ ಹಿಡಿ ಕಂಡ್ಯ ಮರುಳು ಮಾನವ ॥ ೫ ॥

೪೨

ಸತ್ಯವಿರ್ದಮೇಲೆ ಸಾರಸಿದ್ಧಿಗಳೇಕೆ ಕೇಳು ಮಾನವ
ನಿತ್ಯನಾದಮೇಲೆ ನಿರಘನೆಂಬುವುದೇಕೆ ಕೇಳು ಮಾನವ ॥ ಪ ॥

ಕಾಂತೆಯಿರ್ದ ಮೇಲೆ ಕವಚವಿನ್ನೇತಕೆ ಕೇಳು ಮಾನವ (?).
ಚಿಂತೆಯಿರ್ದ ಮೇಲೆ ಚಿತೆಯು ತನುವಿಗೇಕೆ ಕೇಳುಮಾನವ
ಶಾಂತಿಯಿರ್ದ ಮೇಲೆ ಶಮೆದಮೆಯಾತಕೆ ಕೇಳು ಮಾನವ
ಕಾಂತಿಯಿರ್ದ ಮೇಲೆ ಕನಕ ಭೂಷಣವೇಕೆ ಕೇಳು ಮಾನವ ॥ ೧ ॥

ಕ್ರೋಧವಿದ್ದ ಮೇಲೆ ಕೊಲ್ಲುವ ಹಗೆಯಾಕೆ ಕೇಳು ಮಾನವ
ಭೇದವಿದ್ದ ಮೇಲೆ ಬೇರೆಯೆಂಬುವುದೇಕೆ ಕೇಳು ಮಾನವ
ವ್ಯಾಧಿಯಿದ್ದ ಮೇಲೆ ಯಮದಂಡನವೇಕೆ ಕೇಳು ಮಾನವ
ಆಧಿಯಿದ್ದ ಮೇಲೆ ಅನಲಕುಂಡವೇಕೆ ಕೇಳು ಮಾನವ ॥ ೨ ॥

ಪಿಸುಣತ್ವವಿದ್ದರೆ ಪಿರಿಯಪಾತಕವೇಕೆ ಕೇಳು ಮಾನವ
ವ್ಯಸನವನಿರ್ದರೆ ವ್ಯಯಸಂಕಟವೇಕೆ ಕೇಳು ಮಾನವ
ಪ್ರಸಭಮನಿರ್ದರೆ ಪ್ರಥನಭೀತಿಯದೇಕೆ ಕೇಳು ಮಾನವ
ಕುಸುಕುವದಿರ್ದರೆ ಕ್ರೂರಕರ್ಮವೇಕೆ ಕೇಳು ಮಾನವ ॥ ೩ ॥

ಕೃಪಣತ್ವಮಿರ್ದರೆ ಕಿರುಕುಳಗುಣವೇಕೆ ಕೇಳು ಮಾನವ
ನಿಪುಣತ್ವಮಿರ್ದರೆ ನಿಖಿಲವೈಭವವೇಕೆ ಕೇಳು ಮಾನವ
ಅಪಕೀರ್ತಿಯಿರ್ದರೆ ಅಪಮೃತ್ಯುವೇತಕೆ ಕೇಳು ಮಾನವ
ಕಪಟನಿರ್ದರೆ ಕಲುಷಬುದ್ಧಿಯಾಕೆ ಕೇಳು ಮಾನವ ॥ ೪ ॥

ಪರಮೈನಿಲಯಾಖ್ಯಪುಷ್ಪದೊಳಿರ್ದ ಮೇಲೆ ಕೇಳುಮಾನವ
ಪರಮಮೋಕ್ಷ ಸಂಪದದ ಹಂಬಲವೇಕೆ ಕೇಳು ಮಾನವ
ವರಚೆನ್ನವೀರೇಶನೊಲಿಸಿಕೊಂಡ ಮೇಲೆ ಕೇಳು ಮಾನವ
ವರವ ಪಡೆವೆನೆಂಬ ವಾಂಛೆಯಿನ್ನಾತಕೆ ಕೇಳು ಮಾನವ ॥ ೫ ॥

೪೩

ತನ್ನ ನಿಜವನರಿದಾತನೆ ಧರೆಯೊಳು ಧನ್ಯನಲ್ಲವೆ
ಚಿನ್ನಿಲಯದೊಳಿರ್ದು ಚರಿಸುವಾತನೆ ಮಹಾಧನ್ಯನಲ್ಲವೆ ॥ ಪ ॥

ಕ್ಷಾಮಗಾಲದೊಳನ್ನಕ್ಷೇತ್ರವಿಟ್ಟಾತನೆ ಧನ್ಯನಲ್ಲವೆ
ನೇಮವಂತರಿಗರ್ಥನೆರವು ಕೊಟ್ಟಾತನೆ ಧನ್ಯನಲ್ಲವೆ

ಭೂಮೀಶ್ವರಗೊಳ್ಳೆಬುದ್ಧಿ ಪೇಳ್ವಾತನೆ ಧನ್ಯನಲ್ಲವೆ
ಸಾಮಾನ್ಯರನು ನೋಡಿ ಸಲಹುವಾತನೆ ಮಹಾಧನ್ಯನಲ್ಲವೆ ॥ ೧ ॥

ಓಡು ಮಾಣಿಕಗಳ ಒಂದೆಯೆಂಬಾತನು ಧನ್ಯನಲ್ಲವೆ
ಕಾಡುವವರ ನೋಡಿ ಕಾಡದಾತನೆ ಮಹಾಧನ್ಯನಲ್ಲವೆ
ಬಾಡುವ ಬಡವರ ಬಳಿಯೊಳಿದ್ದಾತನು ಧನ್ಯನಲ್ಲವೆ
ಕೀಡುಮಾನವರ ಕೀರ್ತಿಸುವಾತ ಸುಧನ್ಯನಲ್ಲವೆ ॥ ೨ ॥

ಮಾನಿನಿಯರ ನೋಡಿ ಮನವಿಡದಾತನೆ ಧನ್ಯನಲ್ಲವೆ
ಮಾನವುಳ್ಳವರ ಅಭಿಮಾನಕಾಯ್ವಾತನೆ ಧನ್ಯನಲ್ಲವೆ
ಹಾನಿವೃದ್ಧಿಗಳಿಗೆ ಹಾ ಎನ್ನದಾತನೆ ಧನ್ಯನಲ್ಲವೆ
ಭಾನುವುದಯದ ಮುನ್ನ ಭಜಿಸುವಾತನೆ ಧನ್ಯನಲ್ಲವೆ ॥ ೩ ॥

ಅನ್ಯಾಯವನೆ ಬಿಟ್ಟು ಚರಿಸುವಾತನೆ ಧನ್ಯನಲ್ಲವೆ
ದೈನ್ಯದವನ ನೋಡಿ ಧೈರ್ಯವಿತ್ತಾತನೆ ಧನ್ಯನಲ್ಲವೆ
ಮಾನ್ಯರೊಡನೆ ಮನಮಗ್ನವಾದಾತನೆ ಧನ್ಯನಲ್ಲವೆ
ಜನ್ಯನೊಳಳುಕದೆ ಜರುಗದಾತನೆ ಮಹಾಧನ್ಯನಲ್ಲವೆ ॥ ೪ ॥

ಜನವಿರೋಧಗಳ ಜರಿದುನಿಂದಾತನೆ ಧನ್ಯನಲ್ಲವೆ
ಮನವಿಕಾರಗಳ ಮರೆದುನಿಂದಾತನೆ ಧನ್ಯನಲ್ಲವೆ
ಅನುಪಮ್ಯನಿಲಯದೊಳರಿದಿರುವಾತನೆ ಧನ್ಯನಲ್ಲವೆ
ಅನಘ ಚೆನ್ನವೀರನರ್ಚಿಸುವಾತನೆ ಧನ್ಯನಲ್ಲವೆ ॥ ೫ ॥

೪೪

ಭವ್ಯಪುರುಷನಿಗೆ ಬ್ರಹ್ಮವೇತ್ತಯೋಗಿಗೆ ಅಂತರವಿಲ್ಲ
ಕಾವ್ಯಕಾರನಿಗೆ ಕಮನೀಯ ದಿವಿಜಗೆ ಅಂತರವಿಲ್ಲ ॥ ದ್ರು ॥

ಕಾಮನಬಾಣಕೆ ಕಾಮಿನಿನೋಟಕೆ ಅಂತರವಿಲ್ಲ
ಕಾಮಾಂಧನಿಗೆ ಕಣ್ಣುಕಾಣದ ಕುರುಡಗೆ ಅಂತರವಿಲ್ಲ
ಭೀಮಪಿಸುಣನಿಗೆ ಭೀತಿಪಾತಕಕೆ ಅಂತರವಿಲ್ಲ
ನೇಮವಂತನಿಗೆ ನಿರ್ಮಲತೀರ್ಥಕೆ ಅಂತರವಿಲ್ಲ ॥ ೧ ॥

ಮಲಗಿದ ಮನುಜಗೆ ಮರಣವಾದವಗೆ ಅಂತರವಿಲ್ಲ
ಮಲೆತಮಾನವನಿಗೆ ಮದಸೊಕ್ಕಿದಾನೆಗೆ ಅಂತರವಿಲ್ಲ
ಬಲುಮೂಢನಿಗೆ ಗಂಟುಬಲಿದ ಪೆರ್ಗೊರಡಿಗೆ ಅಂತರವಿಲ್ಲ
ನೆಲದೆರೆಯಗೆ ನಾಡೆನೆಲೆಸಿದ ದೇವರಿಗೆ ಅಂತರವಿಲ್ಲ ॥ ೨ ॥

ಆಲಸ್ಯದವನಿಗೆ ಅತಿದರಿದ್ರನಿಗೆ ಅಂತರವಿಲ್ಲ
ಸಾಲಮಾಡಿದವನಿಗೆ ಸೇವೆ ಮಾಡದವನಿಗೆ ಅಂತರವಿಲ್ಲ
ಪಾಲಿಪ ದೊರೆಯಗೆ ಪಡೆದಿರ್ದ ಜನಕಗೆ ಅಂತರವಿಲ್ಲ
ಜಾಲನಿಕ್ಕವನಿಗೆ ಜವನಬಂಟನಿಗೆ ಅಂತರವಿಲ್ಲ ॥ ೩ ॥

ದಾಯಾದನಿಗೆ ಮೊರಿದಹಿಸುವ ಕಿಚ್ಚಿಗೆ ಅಂತರವಿಲ್ಲ
ಬಾಯಿಬಡುಕನಿಗೆ ಬತಗೆಟ್ಟನೀಚಗೆ ಅಂತರವಿಲ್ಲ
ಮಾಯಾಮೋಹಿತನಿಗೆ ಮದ್ಯಪಾನಕನಿಗೆ ಅಂತರವಿಲ್ಲ
ನ್ಯಾಯವಿಲ್ಲದವನಿಗೆ ನೇಮಬಿಟ್ಟವನಿಗೆ ಅಂತರವಿಲ್ಲ ॥ ೪ ॥

ಜನನರಹಿತನಿಗೆ ಜಗದೇಕವೀರನಿಗೆ ಅಂತರವಿಲ್ಲ
ತನುಸಿದ್ಧಿಯವನಿಗೆ ತತಖೇಚರನಿಗೆ ಅಂತರವಿಲ್ಲ
ವಿನುತ್ಯನಿಲಯಕೆ ವಿಶ್ರುತಾವ್ಯಯಕೆ ಅಂತರವಿಲ್ಲ
ಅನಘಚೆನ್ನವೀರಾರ್ಯಗೆ ಅಮೃತಕೆ ಅಂತರವಿಲ್ಲ ॥ ೫ ॥

೪೫

ನೀತಿಮಾರ್ಗವನುಳ್ಳ ನಿಜಮಹಾತ್ಮನಿಗೆ ನಿರಯಮುಂಟೆ
ಜಾತಿಮಾರ್ಗವನುಳ್ಳ ಜಾಣಪುರುಷನಿಗೆ ಜಾಡ್ಯಮುಂಟೆ ॥ ಪ ॥

ಪಾತಕಗುಣವುಳ್ಳ ಪಾಮರನಿಗೆ ಪುಣ್ಯಪಥವುಂಟೆ
ಘಾತಕಗುಣವುಳ್ಳ ಗಾವಿಲನಿಗೆ ಸಾಧುಗುಣವುಂಟೆ
ವಾತಕಲ್ಮಷವುಳ್ಳ ವಠನಿಗೆ 'ಪಯುದಸ್ತ್ರೀ ಒಲಿವುದುಂಟೆ
ಶೀತಕಾಯವನುಳ್ಳ ಶಿಥಿಲಾಂಗನೆಗೆ ರಸಸಿದ್ಧಿಯುಂಟೆ ॥ ೧ ॥

ಅರಿಮರದ ನೆರಳಡರಿದವಗೆ ಮಹಾಕ್ಷಾಮವುಂಟೆ
ತಾರಿಮರದ ಛಾಯಾ ತಾಕಿದವಗೆ ಮಹಾಕ್ಷೇಮವುಂಟೆ

ಗೇರುಮರದ ಕೆಳಗಿರ್ದವನಂಗಕೆ ಕಾಂತಿಯುಂಟೆ
ಬೋರೆಮರದ ಛಾಯಾಬೊತ್ತವನಿಗೆ ಕೆಟ್ಟಚಿಂತೆಯುಂಟೆ ॥ ೨॥

ಮಳೆಗಾಲದೊಳಗಂಚೆಮರಿಯು ತಾ ಚೆನ್ನಾಗಿ ನಡೆವುದುಂಟೆ
ಚಳಿಗಾಲದೊಳು ಬಾಲಚಕ್ರವಾಕಪಕ್ಷಿ ನುಡಿವುದುಂಟೆ
ಅಳಿಗಳು ಸಂಪಗೆಯರಳ ಬನಕೆಹೋಗಿ ಸುಳಿವುದುಂಟೆ
ಗಿಳಿಗಳು ಗಜಗನಗಿಡವೇರಿ ಕೊಕ್ಕಿಯಿಂದೆಳೆವುದುಂಟೆ ॥ ೩ ॥

ಕಮಲಕೆಸರ ತಿಂಬ ಕಪ್ಪೆ ಪೂವಿನರಸ ಕುಡಿವುದುಂಟೆ
ಕಮನೀಯ ಕಸ್ತೂರಿಕರ ಮುರಿದರೆ ಮೃಗ ಮಡಿವುದುಂಟೆ
ಅಮರಾರಿಗಳಿಗಂಜಿಯರ್ಕನು ಮೂಡದೆ ಸುಗಿವುದುಂಟೆ
ಅಮರ್ದಮುಲಗಿ ಮರೆಗಬ್ಬನಿರ್ದರೆ (?) ಕುಮುದ
ಮುಗಿವದುಂಟೆ ॥ ೪ ॥

ತಗರವೇರಿದವನ ತಾಪಕಧಿಕವಾದ ತಾಪಮುಂಟೆ
ಸುಗರವೇರಿದವನ ಸುಪ್ತಿಗಧಿಕವಾದ ಸುಪ್ತಿಯುಂಟೆ
ಪ್ರಗಣ್ಯನಿಲಯಕೆ ಪ್ರತಿಯಾಗಿರುವ ದಿವ್ಯನಿಲಯಮುಂಟೆ
ಅಘಹರ ಚೆನ್ನವೀರಾರ್ಯಗಧಿಕವಾಗುವಾರ್ಯನುಂಟೆ ॥ ೫ ॥

೪೬

ಶ್ರೀಗುರುಕರುಣವ ಪಡೆದ ಮಹಂತನಿಗೆ ಸ್ತುತಿಸುವುದಿನ್ನೇಕೆ
ರಾಗಭೋಗವನಳಿದಿರುವ ವಿರಕ್ತಗೆ ರಮಣಿ ಹಂಬಲೇಕೆ ॥ ಪ ॥

ಶಾಂತಿಖಡ್ಗವನೆ ಪಿಡಿದಿರುವಾತಗೆ ಶತ್ರುಭೀತಿಯೇಕೆ
ಸ್ವಾಂತ ನಿರ್ಮಲಾಗಿರುವ ಸುಜ್ಞಾನಿಗೆ ಸ್ಮರನಂಜಿಕೆಯೇಕೆ
ಭ್ರಾಂತಿಯಳಿದು ಸದ್ಭಾವದಲಿರ್ಪಗೆ ಭವದಬಾಧೆಯೇಕೆ
ಅಂತರಂಗ ಶುದ್ಧವಾಗಿಹ ಜ್ಞಾನಿಗೆ [೧][ಅಘ][೧]ದಟ್ಟುಳಿಯೇಕೆ ॥ ೧ ॥

ಕುಶಲವಿದ್ಯೆಯಲಿ ಕೋವಿದನೆನಿಪಗೆ ಕಲಿತಭಾಗ್ಯವೇಕೆ
ಪಿಸುಣಬುದ್ಧಿಯಲಿ ಪರರ [೨]ಭೇದಿಪಗೆ[೨] ಪುಣ್ಯಮಾರ್ಗವೇಕೆ

---

೧-೧ ಅಂಗ
೨-೨ ಪೀಡಿತ

ಎಸೆವ ತತ್ವಮಯ ಬ್ರಹ್ಮವೇತ್ತನಿಗೆ ಯಮನಭಯವೇಕೆ
ರಸಭರಿತ ನವಕವನ ಪೇಳ್ವನಿಗೆ ರಾಜತನವೇಕೆ ॥ ೨ ॥

ಜನ್ಮಜರಾಮಯ ಮೀರಿರುವಾತಗೆ ಜನರ ಹಂಗೇಕೆ
ತನ್ನ ನಿಜವ ತಾತಿಳಿದಿರುವಾತಗೆ ತೀರ್ಥಯಾತ್ರೆಯೇಕೆ
ನನ್ನಿಯೊಳ್ಳನೆಲೆ ನಿಲಯ ಸಾರ್ದವಗೆ ನಾನಾಚಿಂತೆಯೇಕೆ
ಚೆನ್ನವೀರೇಶಾಚಾರ್ಯರ ಭಜಕಗೆ ಚಂಚಲಮನವೇಕೆ ॥ ೩ ॥

೪೭

ಸೇನೆ ಶುನಕನಿಗೆ ಸಡೆದು ನಿಲ್ಲುವುದೆ ಕೇಳು ಮಾನವ
ಆನೆ ತಾವರೆನೂಲಿಗಡಸಿ ನಿಲ್ಲುವುದೆ ಕೇಳು ಮಾನವ ॥ ಪ ॥

ಹಸಿದಿರ್ದ ಮೃಗಪತಿ ಹಳೆಯಹುಲ್ಲಿಗೆಳಸುವುದೆ ಕೇಳು ಮಾನವ
ಕುಸಿದಿರ್ದ ಖಗಪತಿ ಸೊಣಕ್ರಿಮಿಗೆಳಸುವುದೆ ಕೇಳು ಮಾನವ
ನಸಿವ ಚಾತಕಪಕ್ಷಿ ನದಿನೀರಿಗೆಳಸುವುದೆ ಕೇಳು ಮಾನವ
ಎಸೆವಹಂಸಪಕ್ಷಿ ಎಡೆ ಕುಂಟಿಗೆಳಸುವುದೆ ಕೇಳು ಮಾನವ ॥ ೧ ॥

ರಸಿಕನಧಮನೊಳು ರತಿಯಿಟ್ಟು ನಡೆವನೆ ಕೇಳು ಮಾನವ
ಋಷಿವರ್ಯ ಸಾಲಂಬರೂಢಿಯೊಳಿರುವನೆ ಕೇಳು ಮಾನವ
ಅಸಮ ಭವ್ಯಾತ್ಮಕನಘಜೀವಿಗೊಲಿವನೆ ಕೇಳು ಮಾನವ
ಸುಸಮಯಾನ್ವಿತನು ಸುಖಿಲನ ಬೆರೆವನೆ ಕೇಳು ಮಾನವ ॥ ೨ ॥

ವಿಷದೊಳಮೃತ ಕೂಡಿ ವಿಷವಾಗಬಲ್ಲುದೆ ಕೇಳು ಮಾನವ
ಮೃಷನೊಳುತ್ತಮನಿರ್ದು ಮೃಷನಾಗಬಲ್ಲನೆ ಕೇಳು ಮಾನವ
ಅಸುಗತಿಯೊಳು ಜ್ಞಾನಿ ಅಸುಗತಿಯಾಗುವನೆ ಕೇಳು ಮಾನವ
ಪಿಸುಣನೊಳಿಹ ಸಾಧು ಪಿಸುಣನಾಗುವನೆ ಕೇಳು ಮಾನವ ॥ ೩ ॥

ಅಸುರರಟ್ಟುಳಿಗಂಜಿಯಬ್ರಮು ಪೋಗುವುದೆ ಕೇಳು ಮಾನವ
ವಸುಮತಿ ಕುಲಗಿರಿವೊಜ್ಜೆಗೆ ಬಾಗುವುದೆ ಕೇಳು ಮಾನವ
ಕುಶನಿಧಿ ಸುರಪನ ಕುಲಿಶಕಳುಕುವುದೆ ಕೇಳು ಮಾನವ
ಉಶನನ ಮನವಲ್ಪವಿದ್ಯೆಗೆ ಬಳುಕುವುದೆ ಕೇಳು ಮಾನವ ॥ ೪ ॥

ಆಧ್ಯಾತ್ಮರ ಬಳಿಯೊಳಪರಾಧಿ ಬಾಳ್ವನೆ ಕೇಳು ಮಾನವ
ವಿದ್ಯೇಶ್ವರರರ್ಥ ವಿಮತಿಯು ಕೇಳ್ವನೆ ಕೇಳು ಮಾನವ
ವಿದ್ವದ್ವೈನೆಲೆಯನನು ವಿಶದಾತ್ಮ ಜರಿವನೆ ಕೇಳು ಮಾನವ
ಸಾಧ್ಯ ಚೆನ್ನವೀರನ ಸಾತ್ವಿಕ ಮರೆವನೆ ಕೇಳು ಮಾನವ ॥ ೫ ॥

ಳಲ ॥

ಪ್ರಿಯವಚನಗಳುಳ್ಳ ಪ್ರೌಢನಲ್ಲಿ ಮಹಾದೈನ್ಯಮಿರ್ಪುದು
ವ್ಯಯವಿರಹಿತನಾದ ಯತಿರಾಜನಲ್ಲಿ ಮಹಾಮಾನ್ಯ
ಮಿರ್ಪುದು ॥ ಪ ॥

ವ್ರತದ ಪ್ರೀತಿಯನುಳ್ಳವನ ಮನದೊಳು ಡಂಭಕತ್ವಮಿರ್ಪುದು
ತತ ಶುದ್ಧನಾದಾತನ ಚಿತ್ತದೊಳು ಘನ ಕಪಟಮಿರ್ಪುದು
ಅತಿಲಜ್ಜೆಯುಳ್ಳ ಸಮ್ರಾತ್ಮನಲ್ಲಿ ಜಡತನವನಿರ್ಪುದು
ವಿತತಶೌರ್ಯವನುಳ್ಳ ವೀರನಲ್ಲಿ ನಿಷ್ಕರುಣಮಿರ್ಪುದು ॥ ೧ ॥

ಮಹನೀಯತೇಜಾಂಗ ಮಾನವನೊಳು ದುರ್ಮದವನಿರ್ಪುದು
ಬಹುನುಡಿಗಾರನ ಬಳಿಯಲ್ಲಿ ವಾಚಾಳತ್ವಮಿರ್ಪುದು
ಸುಹಿತಗುಣವನುಳ್ಳ ಸುಜನರಲ್ಲಿ ದೀನತ್ವಮಿರ್ಪುದು
ವಿಹಿತಾಲಂಕಾರವಿರ್ದವನಲ್ಲಿ ಶಠತ್ವಮಿರ್ಪುದು ॥ ೨ ॥

ಭಕ್ತಿಯುಳ್ಳವನ ಭಾವದಲ್ಲಿ ಸಂದೇಹಮಿರ್ಪುದು
ಸೂಕ್ತಿಯುಳ್ಳವನ ಸುಮತಿಯಲ್ಲಿ ಮೌನತ್ವಮಿರ್ಪುದು
ಶಕ್ತಿಯಿಲ್ಲದವನ ಸನ್ನಿಧಿಯಲ್ಲಿ ಸಜ್ಜನತ್ವಮಿರ್ಪುದು
ಯುಕ್ತಿಯಿಲ್ಲದವನೆಡೆಯೊಳು ನಡೆಯಾಲಸ್ಯಮಿರ್ಪುದು ॥ ೩ ॥

ಅನಶನವ್ರತವನಿರ್ದಾತನಲ್ಲಿ ಆಯಾಸಮಿರ್ಪುದು
ಅನಘನಿರ್ದಾತನಲ್ಲಿ ಪರಮ ವಂಚನತ್ವಮಿರ್ಪುದು
ಅನುಪಮರೋಗಿಷ್ಠನಲ್ಲಿ ದೇವಭಕ್ತಿಭಾವಮಿರ್ಪುದು
ಅನುರಾಗದೊಡನೆಯಿರ್ದವನೊಳಧಿಕ ಚಂಚಲತ್ವಮಿರ್ಪುದು ॥ ೪ ॥

ಅಕಳಂಕ [ಋಜು][1]ಭಾವದಾತನಲ್ಲಿ ನಿರ್ಬುದ್ಧಿಯಿರ್ಪುದು
ಪ್ರಕಟಿಸಿರುವ ಮಹಾಪ್ರಾಜ್ಞನಲ್ಲಿ ದುರ್ಭೀತಿಯಿರ್ಪುದು

೧. ಋತು

ಸುಕರ್ಯೆನೆಲೆಯೊಳು ಸೇರಿದಾತನಲ್ಲಿ ಸುಪಥಮಿರ್ಪುದು
ಅಕಳಂಕ ಚೆನ್ನವೀರಾರ್ಯನಂಘ್ರಿಯಲ್ಲಿ ಅಮೃತಮಿರ್ಪುದು

೪೯

ವೇದವಿದರ ಕೂಡಿಕೊಂಡಿರ್ದವಗೆ ಮುಕ್ತಿಯೋಗವೇತಕೆ
ನಾದವಿದರ ಕೂಡಿಕೊಂಡಿರ್ದವಗೆ ಶಕ್ತಿಮಾರ್ಗವೇತಕೆ ॥ ಪ ॥

ಸುಮತಿಗಳಿರುತಿರ್ದ ಸುಕ್ಷೇತ್ರದೊಳತಿಸುಂಟನೇತಕೆ
ಕುಮತಿಗಳೊಂದಾಗಿ ಕೂಡಿರ್ದ ಸಭೆಯೊಳು ಕುಶಲನೇತಕೆ
ಅಮಿತ ಗುಣಾಢ್ಯರಿರ್ದಾಲಯಾಂತರದೊಳಧಮನೇತಕೆ
ವಿಮತರ ಸಂದೋಹವಿರ್ದ ತಾಣದೊಳು [ಪ್ರಮಥ]ನೇತಕೆ ॥ ೧ ॥

ವಿತರಣಶಾಲಿಗಳಿಲ್ಲದೂರೊಳು ಸುಕವೀಂದ್ರನೇತಕೆ
ಜಿತರಣದೊಳು ಹೊಕ್ಕು ಜರುಗುವ ಧೀರರಜಾಲವೇತಕೆ
ವತನವಿಲ್ಲದೆ ಬಾಳುವವನ ಬಲವಿರೋಧ ವಚನವೇತಕೆ
ಗತಿಗೆಟ್ಟು ತಿರುಗುವ ಘನ ಕನಿಷ್ಠನ ಗರ್ವವೇತಕೆ ॥ ೨ ॥

ವಿದ್ಯೆಯನರಿಯದ ವಿರಸ ಮಾನವನೊಳು ವಿನಯವೇತಕೆ
ವೇದ್ಯರಲ್ಲಿ ಚಿತ್ತವೆರಸದವನ ಸುವಿವೇಕವೇತಕೆ
ಆದ್ಯರ ವಾಕ್ಯಗಳನರಿದು ನಡೆಯದವನಾತ್ಮವೇತಕೆ
ಮದ್ಯಪಾನವನು ಮಾಡುವವನ ಬಹುಮಾನವೇತಕೆ ॥ ೩ ॥

ದ್ರವ್ಯಮಿರ್ದವನಿಗಾದರಿಸಿ ಕೊಡುವ ಒಳ್ಳೆಯ ದಾನವೇತಕೆ
ದಿವ್ಯಾನ್ನವನುಂಡು ದಣಿದಾತನಿಗೆ ಓದುವವನೇತಕೆ
ಅವ್ಯಯಾಬ್ಧಿಯಲ್ಲಿ ಅಭಯವೊಡ್ಡಿ ಮಳೆಯಾದರೇತಕೆ
ನವ್ಯಕೂಪವನು ನದಿಯತೀರದಿ ತಾನಗಿದರೇತಕೆ ॥ ೪ ॥

ಮನ್ನಣೆಯನರಿಯದ ಧರ್ಮವನರಿಯದ ಮನುಜನೇತಕೆ
ತನ್ನನುದ್ಧರಿಸಿದ ತಂದೆಯ ಜರಿದ ತನುಜನೇತಕೆ
ಸನ್ನುತ್ಯೆನಿಲಯದ ಸಾರವ ತಿಳಿಯದ ಸದಯನೇತಕೆ
ಚೆನ್ನವೀರೇಂದ್ರನ ಚರಣವ ಭಜಿಸದ ಚಟುಲನೇತಕೆ ॥ ೫ ॥

## ೫೦

ಧನವ ಹೆಚ್ಚಿದ ಮೇಲೆ ದಾತನಾದರೆ ಅದು ಕೆಡಬಲ್ಲದೆ
ಅನಲ ಹೆಚ್ಚಿದಮೇಲೆ ಅಮೃತನಾದರೆ ಅದು ಸುಡಬಲ್ಲದೆ ॥ ಪ ॥

ಜ್ಯೋತಿಯಿರ್ದಮೇಲೆ ಜೊಮ್ಮಿಸಿ ಕತ್ತಲುವಿರಬಲ್ಲದೆ
ಭೂತಿಯಿರ್ದ ಮೇಲೆ ಭೂತಗಣವನೇರಿ ಬರಬಲ್ಲದೆ
ಖ್ಯಾತಿಯಿಂದಿರ್ದ ಮೇಲೆ ಖೇಟಕರುಪಟಳವಲರಬಲ್ಲದೆ
ಮತಿಯಿರ್ದಮೇಲ ಇತರ ಭೋಗಕೆ ಮನಮಲರಬಲ್ಲದೆ ॥ ೧ ॥

ಕೋತಿಹೊಕ್ಕ ಬನ ಕೊನರುಕಾಯಿಗಳಿಂದೆ ಬಿಚ್ಚಬಲ್ಲದೆ
ಓತಿಹೊಕ್ಕಮನೆಯೊಳಗಿರ್ದ ಪರಸಿರಿ ಹೆಚ್ಚಬಲ್ಲದೆ
ಊತಿಯೊಳಗೆ ಪೊಕ್ಕ ಉದಕಜೀವಿಯ ಜಾಲವುಕ್ಕಬಲ್ಲದೆ
ಮೂತಿಕೈಯೊಳು ಸಿಕ್ಕ ಧುರದಪೆಣ್ಣಿನ ಮಾನ ದಕ್ಕಬಲ್ಲದೆ ॥ ೨ ॥

ಮಣ್ಣ ತಿಂಬುವ ಹಾವು ಮಸಗುತೆ ಹೆಡೆಯೆತ್ತಿಯಾಡಬಲ್ಲದೆ
ಅಣ್ಣವಾಲುಂಬುವ ಅಂಚೆಮರಿಯು ಬಕವ ಕೂಡಬಲ್ಲದೆ
ಕಣ್ಣಿರ್ದ ಘೂಕವು ಕರ್ಮಸಾಕ್ಷಿಯ ಬೆಳಗರಿಯಬಲ್ಲದೆ
ಹಣ್ಣಿರ್ದ ಚಾತಕ ಹರಿವ ನೀರಿಗೆ ಬಾಯಿದೆರೆಯಬಲ್ಲದೆ ॥ ೩ ॥

ಕೋಡಗದ ಮುಂದೆ ಕೊಬ್ಬರಿಕಾಯಿಯಿಡಲೊಡೆಯಬಲ್ಲದೆ
ಏಡಗದ ಮುಂದೆ ಎಡೆಯನಿಡಲು ರುಚಿ ಹಿಡಿಯಬಲ್ಲದೆ
ಬಾಡುಂಬುವನ ಕೂಡ ಬಳಕೆಯಿರ್ದರೆ ಕುಲವೇರಬಲ್ಲದೆ
ಕೇಡುಮಾಡುವವನ ಕೆಲದೊಳಿರ್ದರೆ ಕೀರ್ತಿ ಬೀರಬಲ್ಲದೆ ॥ ೪ ॥

ಅಸಮಾನಭವ್ಯನಿಗಘ ಸಂತತಿ ವ್ಯಾಧಿ ತೊಡಕಬಲ್ಲದೆ
ಕುಸುಕುವ ಕುಜನಕೆ ಕೌತುಕಬ್ರಹ್ಮಬೋಧೆ ತುಡುಕಬಲ್ಲದೆ
ಎಸೆವೈನಿಲಯನಿಗೆಡರಾದಡೇನು ತಗಲಬಲ್ಲದೆ
ವಿಶದಾತ್ಮನಿಗೆ ಚೆನ್ನವೀರೇಶನ ಮೋಕ್ಷವಗಲಬಲ್ಲದೆ ॥ ೫ ॥

## ೫೧

ಜ್ಞಾನಹೀನನೊಳು ಧ್ಯಾನಯೋಗ ವೃದ್ಧಿಯಾಗಬಲ್ಲದೆ
ಮಾನಹೀನನೊಳು ಮಹನೀಯಜಪ ಸಿದ್ಧಿಯಾಗಬಲ್ಲದೆ ॥ ಧ್ರು ॥

ಮಲೆತವನಿಗೆ ನೀತಿಮಾರ್ಗವು ಶಾಶ್ವತವಾಗಬಲ್ಲದೆ
ಫಲನುಂಬವನಿಗೆ ಪರಮಾನ್ನವು ಹಿತವಾಗಬಲ್ಲದೆ
ಕಲುಷಾತ್ಮನಿಗೆ ವಿದ್ಯೆಕಲಿಸಿದರವನೊಳು ಬೆಳೆಯಬಲ್ಲದೆ
ಕೊಲುವ ಕರ್ಮಿಗೆ ದೀಕ್ಷೆ ಕೊಟ್ಟರವನೊಳಗುಳಿಯಬಲ್ಲದೆ ॥ ೧ ॥

ಕಣ್ಣೊಳಿರ್ದ ಬೊಂಬೆ ಕರೆದರೆ ತಾ ಮಾತನಾಡಬಲ್ಲದೆ
ಎಣ್ಣೆಯೊಳಗೆ ನೀರೆರೆದು ಕಲಸಿದರೆ ಕೂಡಬಲ್ಲದೆ
ಬೆಣ್ಣೆಮುದ್ದಿಯ ಮೇಲೆ ಬಿಸಿನೀರು ಹೊಯ್ದರೆ ಬಲಿಯಬಲ್ಲದೆ
ಸುಣ್ಣದೆಲೆಯ ಮದ್ದ ಸುಖಿಯೈಶ್ವರ್ಯವು ನಲಿಯಬಲ್ಲದೆ ॥ ೨ ॥

ಬಿಸಿಬೂದಿ ಸಜಲಕ್ಕೆ ಬಿರುಸಿನಿಂದೊತ್ತಲು ಪತ್ತಬಲ್ಲದೆ
ಕೆಸರು ಭೂಮಿಯೊಳು ಕುಂಬಾರಹುಳುವಿಗೆ ಮೆತ್ತಬಲ್ಲದೆ
ರಸದೊಳಾಡಿ ಷಡುರಸರುಚಿ ಹುಚ್ಚು ಸೊಲ್ಲಬಲ್ಲದೆ
ರಸವನುಳ್ಳ ಪಾದರಸವನು ಕೈಯೊಳು ನಿಲ್ಲಬಲ್ಲದೆ ॥ ೩ ॥

ಕನ್ನಡಿಯೊಳು ದ್ರವ್ಯ ಕಂಡರೇನು ಕೈಗೆ ಸೇರಬಲ್ಲದೆ
ಮುನ್ನೀರಗುರುಳಿಯ ಮುಟ್ಟಿದರೆ ಮತ್ತೆ ತೋರಬಲ್ಲದೆ
ಉನ್ನಿ ಕೆಚ್ಚಲೊಳಗಿದ್ದರೆ ಹಾಲುಂಡು ಸೊಕ್ಕಬಲ್ಲದೆ
ಕುನ್ನಿ ತುಪ್ಪವನೆ ಕುಡಿದರೆ ಸವಿಯಾಗಿ ಅಕ್ಕಬಲ್ಲದೆ ॥ ೪ ॥

ಜಲಜಪತ್ರದಮೇಲೆ ಜಲವು ಬೀಳಲದು ಹಿಡಿಯಬಲ್ಲದೆ
ಜಲದಮೇಲಕ್ಷರ ಜವದಿಬರೆಯಲದು ತಡೆಯಬಲ್ಲದೆ
ವಿಲಸಿತೈನಿಲಯಯವಿರಹಿತನಿಗೆ ಶಾಂತಿ ಬೆರೆಯಬಲ್ಲದೆ
ಅಲಘು ಚೆನ್ನವೀರನರಿಯದವರಿಗೆ ಮುಕ್ತಿ ದೊರೆಯಬಲ್ಲದೆ ॥ ೫ ॥

೫೨

ಸಜ್ಜನಪುರುಷರ ಸಂಗದೊಳಿರುತಿರೆ ಸ್ವರ್ಗದ ಪಥವೇಕೆ
ಲಜ್ಜಾಹೀನರ ನೆರವಿಯೊಳಿರುತಿರೆ ಲಘುತನವಿನ್ನೇಕೆ ॥ ಪ ॥

ದುರ್ಜನಮನುಜರ ಒಡಗೂಡಿರುತಿರೆ ದುಷ್ಟಮಾರಿಯಾಕೆ
ಪರ್ಜನ್ಯವು ತಾ ತಡದಿರೆ ಲೋಕಕೆ ಪ್ರಳಯವು ಇನ್ನೇಕೆ

ಊರ್ಜಿತ ಸತ್ಕವಿತಾಗುಣಮಿರುತಿರೆ ಉರ್ವಿಯಾಳುದೇಕೆ
ವರ್ಜಿಸಿ ಪಂಚೇಂದ್ರಿಯ ಗೆಲಿದಿರುತಿರೆ ವ್ರತನೇಮಗಳೇಕೆ ॥ ೧ ॥

ದೂಷಕ ನರರ ಸಹವಾಸದೊಳಿರುತಿರೆ ದುಷ್ಕೃತ್ಯಗಳೇಕೆ
ಶೇಷ ಮನೆಯೊಳಗೆ ಸೇರಿಕೊಂಡಿರುತಿರೆ ಸಾವದು ದೂರೇಕೆ
ಓಸರಿಸದೆ ವೈರಾಗ್ಯದೊಳಿರೆ ವನವಾಸದಿ ತಪವೇಕೆ
ಆಸೆಯಳಿದು ನಿರ್ದೋಷಕನಾಗಿರೆ ಕಾಶಿಯಾತ್ರೆಯೇಕೆ ॥ ೨ ॥

ಕಪಟಾತ್ಮರ ಕೂಡಿರುತಿರೆ ತನಗೆ ಕಂಟಕವಿನ್ನೇಕೆ
ರಿಪುಚಯದೊಳು ಹೊಂದಿರುತಿರೆ ದೇಹಕೆ ರೋಗಗಳಿನ್ನೇಕೆ.
ವಿಪುಲೈಸಲೆ ಚೆನ್ನವೀರೇಶ್ವರ ಕರವಶನಾದ ಬಳಿಕೆ
ಸುಪಥ ಚತುರ್ವಿಧಪದದೊಳು ಸಮನಿಪ ಸುಖಂಗಳಿನ್ನೇಕೆ ॥ ೩ ॥

೫೩

ಘೋರ ಭವಕೆ ತನುಗೊಡದಾತಗೆ
ಮೋಹಿಯೆನಲಿಕಾಗದು
ಸಾರದ್ವೈನಿಲಯಕೆ ಸಾರ್ದಾತಗೆ
ಜೀವಿಯೆನಲಿಕಾಗದು
ವೀರವರ ಚೆನ್ನವೀರನಾಳಿಗೆ
ಭವಿಯೆನಲಿಕಾಗದು ॥ ೫ ॥



೧

ಮಂಗಳ ಗಣರಾಜ ಜಯತು
ಮಂಗಳ ಘನತೇಜ ಜಯತು
ಮಂಗಳ ಶ್ರೀವಿಘ್ನರಾಜ ನಿಮಗೆ ಮಂಗಳಂ ॥ ಪ ॥

ಸಂದವಿಭವ ಶಿವನಗ್ರೀವ
ದಿಂದ ಉದಯವಾದ ಸದಯ
ಉಂದುರೇಂದ್ರ ರಥ ಮುನೀಂದ್ರ ನಿಮಗೆ ಮಂಗಳಂ ॥ ೧ ॥

ಲೋಕ ಪೂಜ್ಯ ನಿರ್ಜರೇಜ್ಯ
ಏಕದಂತ ವಿಮಲಸ್ವಾಂತ
ನಾಕನಾಥ ವಿನುತ ವಿತತ ನಿಮಗೆ ಮಂಗಳಂ ॥ ೨ ॥

ಪದ್ಮಪ್ರೀತ ಮಣಿಕಿರೀಟ
ಪದ್ಮಜಾತ ಶೌರಿವಿತತ
ಛದ್ಮದೈತ್ಯ ಭೇದನಿತ್ಯ ನಿಮಗೆ ಮಂಗಳಂ ॥ ೩ ॥

ನಾಗತುಂಡ ಸುಪ್ರಚಂಡ
ನಾಗಭೂಷ ಚಿತ್ರವೇಷ
ಶ್ರೀಗಣೇಂದ್ರ ಸುಗುಣಸಾಂದ್ರ ನಿಮಗೆ ಮಂಗಳಂ ॥ ೪ ॥

ವರ್ಯನಿಲಯ ದುರಿತವಿಲಯ
ವರದ ಚೆನ್ನವೀರೇಶಾರ್ಯ
ಸ್ಫುರಿತ ಮುಖಾಂಬೋಜ ಸೂರ್ಯ ನಿಮಗೆ ಮಂಗಳಂ ॥ ೫ ॥

೨

ದೇವಿಮಂಗಳಂ ದಿವ್ಯಾಂಗಿ ದುರ್ಗಾದೇವಿ ಮಂಗಳಂ
ಪಾವನಕರ ಮಹಾದೇವಿ ದೇವಿ ಮಂಗಳಂ ॥ ದ್ರು ॥

ವಿನುತ ಸುರಾಳಿ ವಿಧುರುಚಿ ಮೌಳಿ
ವಿನಮಿತ ಸಪ್ತಮಾತೃಕಾಳಿ ಕಾಳಿ ॥ ೧ ॥

ಪಿತೃಪತಿ ಜೈತ್ರೆ ಪಿಂಗಲನೇತ್ರೆ
ಪಿತೃಗಣ ಮಾನಸಪುತ್ರಿ ಪುತ್ರಿ ॥ ೨ ॥

ಐನಿಲಯಾರ್ಯ ಅಮೃತ ನಿರ್ದಾಯ
ಐನಿಲಯ ಚೆನ್ನವೀರಾರ್ಯ ॥ ೩ ॥

೩

ಶುಭಮಂಗಳಂ ಜಯಶಿವಲಿಂಗ ಭವತೆ
ಲಿಂಗಭವತೆ ಇಷ್ಟಲಿಂಗಭವತೆ
ಸರ್ವಮಂಗಳ ಹೃದಾಬ್ಜಪತಂಗ ಭವತೆ ॥ ಪ ॥

ಅಂಗಜಾತಂಗ ಮಾತಂಗ ಘನಪಿಂಗದೃಗ
ತುಂಗ ಸುಚಿದಂಗ ಗುರುಲಿಂಗಭವತೆ ॥ ೧ ॥

ದೇವಗಣ ಪ್ರಮುಖ ಸದಾವನತ ಪದ ರಾ
ಜೀವ ವಿಷಗ್ರೀವ ಮಹಾದೇವ ಭವತೆ ॥ ೨ ॥

ಸೋಮಶಿಖಿ ಧಾಮನಿಧಿ ರಾಮರುಚಿ ರಾಮಶಿವ
ಸಾಮಗಾನಪ್ರಿಯ ಭೀಮ ಭವತೆ ॥ ೩ ॥

ಅಂಬಾನನಂಬುಜ ವಿಡಂಬ(?) ರೋಲಂಬ ದಿ
ಶಾಂಬರಂಬಕಚ ಶಂಭು ಭವತೆ ॥ ೪ ॥

ಭಾಸುರೈನೆಲೆನಿವೇಶ ಗುರುಚೆನ್ನವೀ
ರೇಶ ಮಹೇಶ ಮದೀಶ ಭವತೆ ॥ ೫ ॥

೪

ಜಯಮಂಗಳಂ ನಿತ್ಯಶುಭಮಂಗಳಂ
ಜಯ ಜಯತು ಶ್ರೀ ಇಷ್ಟಲಿಂಗೇಶಗೆ ॥ ದ್ರು ॥

ಶ್ರೀದಸಖ ಶ್ರೀದವಸು
ಧಾಧಾರ ಕೋದಂಡ
ವೇದ ಘೋಟಕ ತ್ರಿಪುರ ಭೇದನನಿಗೆ
ಗೋಧವ ಶ್ರೀಧವಗೆ
ವೇದ್ಧನಾರ್ಚಿತ ಯುಗ್ಮ
ಪಾದಶಾದಜ ಪರಮಾಮೋದ ಪರಶಿವಗೆ ॥ ೧ ॥

ಕಾಂಡನಿಧಿ ಡಿಂಡೀರ
ಪುಂಡರೀಕಾಕಾಶ
ಶುಂಡಾಲ ಪಾಂಡುಕರ ಪಾಂಡುರಂಗಗೆ
ಕಾಂಡಜ ತುಂಡಹತ
ದಂಡಧರ ವಿಜಿತಕರ
ದಂಡ ಪ್ರಕಾಂಡಹರ ಖಂಡಶಶಿಧರಗೆ ॥ ೨ ॥

ಕಾಕೋಲಸೂರ ಶ್ರೀ
ತಾಕಾರ ಗೋಸುಮೇ
ನಕಾಸ್ಯ ಕೋಕನದ ಕೋಕ ಪ್ರಿಯಗೆ
ಶ್ರೀಕರ್ರೈನಿಲಯ ಗುರು
ನಾಕೇಶ ಸುತ ಶರದ
ಲೋಕಾಧಿಪತಿ ಚೆನ್ನವೀರೇಶಗೆ ॥ ೩ ॥

೫೯

ಮಂಗಳಾರತಿ ನೀವೆತ್ತಿರೆ ಮಾನಿತ ಸಜ್ಜನರೆ
ಮಂಗಳಮಯ ಪರಮಾನಂದನಿಗೆ
ಪೊಂಗುವ ಕಂದರಪುರದಿಂದ್ರನಿಗೆ ॥ ದ್ರು ॥

ಶೀತಾದ್ರಿಪುತ್ರಿಪ್ರವರಗೆ ಶೀತಕರಧರಗೆ
ಶ್ವೇತಶೈಲನಿಕಾಯ್ಯನಿಗೆ ಶ್ವೇತಾಂಗಾರ್ಯನಿಗೆ
ಮಾತಂಗಮದ ಸಂಹರನಿಗೆ ಮಾತನಯಹರನಿಗೆ
ಭೂತವಿನಾಥಗೆ ಬುಧಸಂಪ್ರೀತಗೆ
ಪೋತ ಮಹೇಶಗೆ ಪುರವಿನಾಶಗೆ ॥ ೧ ॥

ಜೀಮೂತಾಸಿತ ಕಂಧರನಿಗೆ ಜೀಮೂತಧರನಿಗೆ
ಸೋಮಾಗ್ನಿಸೂರ್ಯನೇತ್ರನಿಗೆ ಸೋಮಸುಮಿತ್ರನಿಗೆ
ಭೀಮಸುಂಗೀತಲೋಲನಿಗೆ ಭೀಮಭೀಲಯನಿಗೆ
ಗೋಮಿನಿಪ್ರಿಯನಿಗೆ ಗೋರಿಪುಪ್ರಜನಿಗೆ
ಆ ಮಹಾಂಗನಿಗೆ ಅಷ್ಟಾಂಗನಿಗೆ ॥ ೨ ॥

ಪರಿಸುತನುತ ವೃಷಭವಾಹನಗೆ ಹರಿಸುತದಾಹನಗೆ
ಮರುದಾವಳಿಯ ವನಕರನಿಗೆ ವರವೇಷ್ಟಕರನಿಗೆ
ವರಗುಣನಿಧಿ ಪರಮೇಶ್ವರನಿಗೆ ವರದೇಶ್ವರನಿಗೆ
ಪರಮೈನಿಲಯಗೆ ಪರಮತವಿಲಯಗೆ
ಗುರುಚೆನ್ನವೀರಗೆ ಗುಪ್ತಸಾರಗೆ ॥ ೩ ॥

೬

ಆರತಿ ಬೆಳಗುವೆನು ಅಮೃತಾಕರ ಶಂಕರನಿಗೆ
ಆರತಿ ಬೆಳಗುವೆನು ಭಾರತಿಪೂಷಗೆ ಭವ್ಯಜನೇಶಗೆ
ಮಾರಮಾಪ್ರಿಯನಿಗೆ ಮಂಗಳಮಯನಿಗೆ ॥ ಪ್ರ ॥

ವೇದತುರಂಗಮಗೆ ವಿದಿತ ವೇದಾಂತಕ್ರಮಗೆ
ಶ್ರೀದಸುಮಿತ್ರನಿಗೆ ಶಿವಗಣಮೋದಕ ಗೋತ್ರನಿಗೆ
ಸಾಧು ಹೃದಾಕರಗೆ ಸಮಸೌಖ್ಯಾಗಮ ಶುಭಕರಗೆ
ಗೋಧರಸಂದನ ಗೋಪ್ರದಕರನಿಗೆ
ಗೋಧವವರನಿಗೆ ಗೌರೀವರನಿಗೆ ॥ ೧ ॥

ಶೀತಕಿರಣಧರಗೆ ಶಿಪಿವಿಷ್ಟತತಪುರಹರಗೆ
ಶ್ವೇತಕಲೇವರಗೆ ಸ್ವರ್ನದಿಪಾತಧೃತಶಿರಗೆ
ಭೂತಗಣೇಶ್ವರಗೆ ಬುಧಜನವ್ರಾತ ಸುಧೀಶ್ವರಗೆ
ವೀತಿಹೋತ್ರ ಸವಿಧುರವಿನೇತ್ರಗೆ
ಪಾತಕಧೂತಗೆ ಫಣಿಯುತ ಶ್ರೋತ್ರಗೆ ॥ ೨ ॥

ಪನ್ನಗವಲಯನಿಗೆ ಪಾಪೋತ್ಪನ್ನ ಪ್ರಲಯನಿಗೆ
ಪಾನ್ನಿಧಿ(?) ಶರನಿಧಿಗೆ ಪರಿಪೂರ್ಣೋನ್ನತ ಗುಣನಿಧಿಗೆ

ವಿನ್ನಾನ್ವಿತಭವಗೆ ವಿತತ ಮರುನ್ನಿಕಾಯಧವಗೆ
ಸನ್ನುತೈನಿಲಯಸದನ ಮಹೇಶಗೆ
ಚೆನ್ನಿಗಭೇಶಗೆ ಚೆನ್ನವೀರೇಶಗೆ ॥ ೩ ॥

೭

ಜಯಮಂಗಲ ಜಯಪಿಂಗಲಕುಂತಲ ಶಿವಸಾಂಬ
ಜಯ ಶುಭಕರ ಜಯ ಶುಭಕರ ಸುತಗಣನಿಕುರುಂಬ
ಜಯದೇವ ಜಯದೇವ ॥ ಪ್ರ ॥

ಕ್ರತುಭುಜ ಭುಜಧೃತ ದಶಭುಜ
ಹುತವಹ ಘನ ನೇತ್ರ
ಹೃತಕಾನನ ಕಲಭಾನನ
ಪಿತ ಪಾಂಡುರಗಾತ್ರ
ದಿತಿನಂದನ ವಿತತೇಂಧನ
ವಿಹೃತಾಸು ಸಮಿತ್ರ
ಶತಮಖ ಮುಖ ಮುನಿ ಹಯಮುಖ
ನತಕ್ರಮ ಶತಪತ್ರ ॥ ೧ ॥

ಶರನಿಧಿಕೃತ ಶರನಿಧಿಧೃತ
ಹರಿಯಾತ್ಮಜ ಪ್ರಲಯ
ಸುರಪಥಕಚ ಸೂನೃತಪಚ
ಗರಧರ ವರವಲಯ
ಪರಶಂಕರ ಪರ ಸಂಕರ
ಪರತರ ಥಲಸದಯ
ವರುಣಾಲಯ ದಿವಿಜಾಲಯ
ಕಾರ್ಮುಕನಗನಿಲಯ ॥ ೨ ॥

ಜಿತಶಂಬರ ಜಿತಶಂಬರಧರ
ಪದ ನುತ ಶರದ
ನುತ ಕರ್ತಪರಥ ಭೃದ್ಭವ
ಸಚಾತಕ ಶರದ

ಯತಿಸಂಚಯ ಸತತಾಶ್ರಯ
ರುಜಮೋಚದ್ವಿರದ
ವಿತತ್ಯನೆಲೆ ಪತಿ
ಚೆನ್ನವೀರೇಶ್ವರ ವರದ ॥ ೩ ॥

೮

ಧೂಪಮರ್ಚಿಸುವೆನು ಧುನಿಧರಶಿವಗೆ
ಮಾಪಾರ್ಚಿತಗೆ ಭವ್ಯ ಮನ್ಮಥಮೃಡಗೆ ॥ ಪ್ರ ॥

ಗೋಪತಿಶಿರ ಹರಗೆ ಗೋಪತಿವರಗೆ
ಗೋಪತಿಸುತಪರಗೆ ಗೋಪತಿಶರಗೆ ॥ ೧ ॥

ಹರಿಪುತ್ರಭಂಗನಿಗೆ ಹರಿಪತ್ರಾಂಗನಿಗೆ
ಹರಿಧರ ವರಾಂಗನಿಗೆ ಹರಿನಿಷಂಗನಿಗೆ ॥ ೨ ॥

ಸೋಮಾರ್ಕರಕ್ಷನಿಗೆ ಸೋಮಪಕ್ಷನಿಗೆ
ಸೋಮೌಘಾಧ್ಯಕ್ಷನಿಗೆ ಸೋಮದಕ್ಷನಿಗೆ ॥ ೩ ॥

ಅಮೃತ ಪ್ರದಾತನಿಗೆ ಅಮೃತ ಪೂತನಿಗೆ
ಅಮೃತಾಂಗ ಖ್ಯಾತನಿಗೆ ಅಮೃತ ದ್ಯೋತನಿಗೆ ॥ ೪ ॥

ವರದೈನಿಲಯಾರ್ಯನಿಗೆ ವರಚೆನ್ನವೀರನಿಗೆ
ವರರೂಪಶಂಕರಗೆ ವರಶೋಭಾಕರಗೆ ॥ ೫ ॥

೯

ಶ್ರೀಗುರು ಪರಂಜ್ಯೋತಿ ಸಚ್ಚಿದಮಲಮೂರ್ತಿ
ಯೋಗಿಜನ ಮಂದಾರ ನಿರ್ವಿಕಾರ
ವಾಗೀಶ ಗರುಡಪದ ವಾಸವಾರ್ಚಿತ ಪಾದ
ಭೋಗೀಂದ್ರಕೇಯೂರ ಭವ ವಿದೂರ

ಸಾಗರಾಂಬರಾರ್ಕ ಶಶಿ ಪವನ ಪವನಸಖ
ನಾಗಾತ್ಮ ಪುಷ್ಕರಾನ್ವಿತ ಶರೀರ
ಯೋಗ ಪ್ರಲೀನಾಕ್ಷ ಯಮಿವರ ವಿರೂಪಾಕ್ಷ
ಆಗಮ ಶ್ರುತಿದೂರ ಅಮಿತ ಶೂರ
ದೇವ ಬಹು ಪರಾಕು ॥ ೧ ॥

ದಿವಿಜಗಣ ಮಣಿಮಕುಟ ತಟಘಟಿತ ಪ್ರಸ್ಫುರಣ
ನವಾರುಣಕೀರ್ಣ ಕಿರಣ ಚರಣ
ಪ್ರವಿಮಲ ಪ್ರಾಚೀನ ಪ್ರಚುರ ಪ್ರಮಥ ಪ್ರಚಯ
ಭುವನನಿಧಿ ಭವನಪಾಲನಶೀಲ
ಕುವಲಯಾನಂದಕರ ವಿಘ್ನಹರಣ
ಅವನೀಶತಾಂಗಬ್ರ ಕುಸುಮನಿಧಿ ನಿಷಂಗ
ಭವಹರ ವಿರೂಪಾಕ್ಷ ವಿಜಿತಕರಣ
ದೇವ ಬಹು ಪರಾಕು ॥ ೨ ॥

ಗೋಪಾಲ ಪತ್ರವಪು ಗಹನ ದಹನಪ್ರತಿಮ
ಗೋಪಕ ಶಕಲ ಕರಸತ್ಯಸಾಂದ್ರ
ಗೋಪಕೇತನ ನಳಿನ ರುಚಿರಾಮ ಧೃತಕ್ರಮ
ಗೋಪನಂದನ ಗರ್ವ ಗೋಸುರೇಂದ್ರ
ಗೋಪಕೋದಂಡ ವೇದಂಡ ಜಿನಥದ
ಗೋಪಸತ್ರವ ಮುಕುಟ ವರಗಣೇಂದ್ರ
ಗೋಪ ಡಿಂಡೀರ ಸುರ ಶುಂಡಾಲ ಕಾಂಡನಿಧಿ
ಗೋಪ್ರಭಾ ಗೌರಾಂಗ ಸಜ್ಜನೇಂದ್ರ
ದೇವ ಬಹು ಪರಾಕು ॥ ೩ ॥

ನಿಟಿಲತಟ ಚಟುಳ ಸ್ಫುಲಿಂಗಾಗ್ನಿ ಲೋಚನು
ತ್ಕಟ ಭಟಾಭಟಾರ್ಭಟಕ ಪುಟಭೇದನ
ಸ್ಫುಟದಹನ ಕೃತಕೃತಾಂತ ಘೃತ ಕ್ರತುಜೈತ್ರ
ನಟನ ಪ್ರತಾಪವಪುಯುಗ್ಮರಸನ
ಕಟಕ ಕಂಕಣಹಾರ ಕುಂಡಲಂಗುಲಾಭರಣ
ಕಟಿಸೂತ್ರ ದಿವ್ಯಾಲಂಕಾರ ಮುನಿಜನ
ಪಟಲ ಪ್ರಸ್ತುತ ಪಾದಪಂಕಜ ಪರಮೇಶ
ಪಟುದೈತ್ಯಗೋತ್ರ ಪರವೃಷವಾಹನ
ದೇವ ಬಹು ಪರಾಕು ॥ ೪ ॥

ಖ್ಯಾತಕವಿವ್ರಾತ ಪರಿಪೂತ ಸಚ್ಛ್ವೇತಕಂ
ಜಾತ ಕಾನನರಮಿತ ಶ್ವೇತಕಾಯ.
ವಾತಸಂಜಾತ ಸಂಗೀತ ಸಂಪ್ರೀತ ಗಣ
ನಾಥ ಗುಹತಾತಗ್ನಿರೇತ ವಿಜಯ
ಶಾತಕುಂಭಾದ್ರಿ ಗೃಹಜಾತ ವಿನುತ್ಯನಿಲಯ
ನಾಥ ಶ್ರೀ ಚೆನ್ನವೀರಾರ್ಯ್ಯಾಶ್ರಯ
ಭೂತಸಂಘಾತ ಪರಿವಾಸ ಮಚ್ಛ್ವೇತಂಬು
ಜಾತ ಮಧುವ್ರತ ವಿರೂಪಾಕ್ಷ ಸದಯ
ದೇವ ಬಹು ಪರಾಕು

೧೦

ದೇವ ಜಯ ದಿವ್ಯಪ್ರಭಾವ
ಪಾವಕಾಕ್ಷ ಸುರಪಟಲಾಧ್ಯಕ್ಷ
ಜೀವಿತೇಶ ನಿರ್ಜಿತ ಭೋಗೇಶ ॥ ದ್ರು॥

ಸೈಂಧವಧರ ಶ್ರುತಿ
ಸೈಂಧವ ಪಶುಪತಿ
ಸೈಂಧವಾಸ್ಯನುತ
ಸೈಂಧವರಥಜಿತ ॥ ೧ ॥

ಪ್ರದರ ಕುಧರ ಭಿದು(?)
ಭಿದುರ ಮಧುರಿಪು
ಪ್ರದರ ಸುಧಾವಿಧು.
ಸುದರ ಶುಭ್ರಾಂಗ ॥ ೨ ॥

ನಂದತೂಣ ನಗ
ನಂದನೆ ಮುಖಾರ
ವಿಂದ ಮರಂದ
ನಂದ ಮಿಳಿಂದ ॥ ೩ ॥

ಸ್ಥೂಲ ಕಪೋಲ ಕ
ರಾಲಕ ಮಾಲಾ

ಭೀಲ ವಿಶಾಲಕ
ವಾಲ ಸುಶೀಲ ॥ ೪ ॥

ಸಾರ್ಯನಿಲಯ
ಗಾರ ಧೀರ ಜನ
ವಾರ ವಿನುತ ಚೆನ್ನವೀರಣಾರ್ಯ
ಗುರುದೇವಜಯ ದಿವ್ಯ ಪ್ರಭಾವ ॥ ೫ ॥

೧೧

ಮಂಗಳಂ ಮಹೇಶತನಯ
ಮಂಗಳಂ ಮನೋಜವಿಲಯ
ಮಂಗಳಂ ಮಹಾಭ್ಯುದಯ ನಿಮಗೆ ಮಂಗಳಂ ॥ ಪ ॥

ಮೇಟಿಯೆನಿಸಿ ಮೆರೆವ ಬಡ
ಪೇಟಿ ರಾಯಚೋಟಿ ಶರಭ
ಕೋಟಿ ಪರಗಣೇಂದ್ರ ಮಹಿಮಾಟ ॥ ೧ ॥

ಶ್ರೀಯುತ ಪ್ರಭಾಯುತ ಪ್ರ
ಮೇಯ ಧುರ್ಯ ಭಕ್ತರಂತ
ರಾಯ ವಿಶೃತ ವೀರ ರಾಜರಾಯ ॥ ೨ ॥

ತ್ರ್ಯಂಬಕ ಕಾಳಿಕಾಂಬಕಾಂತ
ಸಂಭವ ಪ್ರಸನ್ನ ರೂಪ
ಶಂಬಹಸ್ತ ವಿನುತಸುರ ವಿಡಂಬ ॥ ೩ ॥

ದಕ್ಷವಿಧಿಮಖಾರಿ ಸರ್ವ
ಭಕ್ಷ ಜಿಹ್ವಾಖಂಡಿತ ಸ
ದೃಕ್ಷ ರುದ್ರಮಮಾಧ್ಯಕ್ಷ ॥ ೪ ॥

ಚಂಡದೈತ್ಯವಕ್ತ್ರಮಾಲಾ
ಕಾಂಢಧನ್ವಶರಕರಾಪ
ಭಿಂಡಿವಾಲ ವಿಧೃತ ಭುಜಾದಂಡ ॥ ೫ ॥

ಕ್ಷುದ್ರಮತ ವಿನೂನ ಭವ್ಯ
ವಿದ ಶರಣಜನ ಶರಣ್ಯ
ಭದ್ರಕಾಳಿರಮಣ ವೀರಭದ್ರ ॥ ೬ ॥

ಸುಜನವಿಮಲ ಹೃನ್ನಿವೇಶ
ವೃಜಿನಪಂಕ ಪಂಕ ಭೇಶ
ರಜನಿರಮಣ ಮದವಿನಾಶ ವಿಜಯ ॥ ೭ ॥

ಘೋರ ಕಲ್ಮಷಾಭ್ರ ಮಾರ
ಮಾರುತ ಮಹನೀಯ ರುದ್ರ
ಸಾರ ಫಲಪ್ರದ ಮಹಾವೀರ ॥ ೮ ॥

ಶೌರ್ಯವೀರ್ಯ ಸತ್ವಗುಣ ವಿ
ಧುರ್ಯ ಸದ್ಯನಿಲಯಪುರಿ ನಿ
ಕಾರ್ಯ ವಿದಿತ ಚೆನ್ನವೀರಣಾರ್ಯ ॥ ೯ ॥

೧೨

ಮಂಗಳಂ ಶುಭಸಾಂದ್ರನಿಗೆ
ನಿತ್ಯಮಂಗಳಂ ಮೃಗೇಂದ್ರನಿಗೆ ॥ ಧ್ರು ॥

ವಿಶ್ವಂಭರ ವಿಖ್ಯಾತನಿಗೆ । ಕ್ರೂರ
ವಿಶ್ವಮಯ ನಿರ್ಧೂತನಿಗೆ ॥ ೧ ॥

ವಿಜಿತರೇತವ್ರಾತನಿಗೆ । ಲೋಕ
ವಿಜಿತ ನಿಧನ ವಿಯುತನಿಗೆ ॥ ೨ ॥

ರುದ್ರಮಣಿ ಜಪ ನೇಮನಿಗೆ । ಭೂ
ರುದ್ರಕುಲ ಸಾರ್ವಭೌಮನಿಗೆ ॥ ೩ ॥

ನಿರುಪಮ ಯೋಗೀಂದ್ರೇಜ್ಯನಿಗೆ । ಭವ್ಯ
ನಿರಘಾತ್ಮಕ ಜಗತ್ಪೂಜ್ಯನಿಗೆ ॥ ೪ ॥

ವೀರೈನೆಲೆ ಚೆನ್ನವೀರೇಶಗೆ ಮಹಾ
ವೀರಾಕಾರ ಮೃಗೇಶನಿಗೆ ॥ ೫ ॥

೧೩.

ನಿವಾಳಿ ಶ್ರೀಗುರುಲಿಂಗ ಮಹಾದೇವನೆ
ನಿವಾಳಿ ಚರಲಿಂಗ ನಿಮಗೆ ನಿವಾಳಿ ॥ ಪ ॥

ಶ್ರೀಪತಿ ನಮಿತನೆ ಪಾಪವಿರಹಿತನೆ
ಗೋಪತಿ ಗಮನನೆ ನಿಮಗೆ ನಿವಾಳಿ ॥ ೧ ॥

ನಿಗಮ ತುರಂಗನೆ ಅಗಣಿತ ಮಹಿಮನೆ
ನಗಸುತೆ ರಮಣನೆ ನಿಮಗೆ ನಿವಾಳಿ ॥ ೨ ॥

ಸ್ಮರನ ದರ್ಪವಿಭಂಗ ಮಿರುಗು ಹರಿಣಾಂಗ
ಶರಣ ಜನರ ಸಂಗ ನಿಮಗೆ ನಿವಾಳಿ ॥ ೩ ॥

ಕಾಲಸಂಹರನೆ ಶೂಲಂಕಪಸ್ತನೆ
ನೀಲಕಂಧರನೆ ನಿಮಗೆ ನಿವಾಳಿ ॥ ೪ ॥

ವೇದ್ಯರ ಪ್ರಿಯನೆ ಭೇದ್ಯಸುದೂರನೆ
ಆದ್ಯಂತರಹಿತನೆ ನಿಮಗೆ ನಿವಾಳಿ ॥ ೫ ॥

ಆರು ಕೋಣೆಗಳಲ್ಲಿ ಆರು ವರ್ಣಗಳಿಂದ
ಪೂರೈಸಿದಭವನೆ ನಿಮಗೆ ನಿವಾಳಿ ॥ ೬ ॥

ಸಾಲುಮಂಟಪದೊಳು ಲೀಲೆಯಿಂ ಬೆಳಗುವ
ಬಾಲರ್ಕತೇಜನೆ ನಿಮಗೆ ನಿವಾಳಿ ॥ ೭ ॥

ಮೂರು ಕೂಟಾಗ್ರದಿ ತೋರಿ ಪ್ರಜ್ವಲಿಸುವ
ತಾರಕ ಬ್ರಹ್ಮನೆ ನಿಮಗೆ ನಿವಾಳಿ ॥ ೮ ॥

ಕ್ಷಿತಿಯೊಳ್ಳೆನೆಲವಾಸ ಸಿತ ಚೆನ್ನವೀರೇಶ
ಅತುಳಚಿದ್ರೂಪನೆ ನಿಮಗೆ ನಿವಾಳಿ ॥ ೯ ॥

೧೪

ಮಂಗಲಂ ಮಹಾದೇವ ಮಹಾದೇವ
ಮಂಗಲಂ ಮೇಚಕಗ್ರೀವ ॥ ಪ ॥

ಶಿತತನು ಜಿತಕಾಮ ಧೃತಸೋಮ
ನತಜನತತಿಗಭಿರಾಮ ॥ ೧ ॥

ಹಿಮಕರ ಕೋಟೀರ ಯಮಿಸಾರ
ನಮಿತಘಗಜ ಕಂಠೀರ ॥ ೨ ॥

ಲಸದ್ವೈನೆಲೆವಾಸ ವಸುಧೀಶ
ಅಸದೃಶ ಚೆನ್ನವೀರೇಶ ॥ ೩ ॥

೧೫

ಈಶ ಮಂಗಳಂ ವಿಶ್ವೇಶಗೇಶ
ಶ್ರೀಶ ವಾಣೀಶ ಶಚೀಶಾಧೀಶ ॥ ಧ್ರು ॥

ಸೈಂಧವಪುತ್ರ ಸೈನ್ಯವಿಜೈತ್ರ
ಸೈಂಧವಾನಲ ಲೋಕನೇತ್ರನೇತ್ರ ॥ ೧ ॥

ಅಚಲವರೂಥ ಅಘನಿರ್ಧೂತ
ಅಚಲ ಕಾರ್ಮುಕವ ಸುರೇತರೇತ ॥ ೨ ॥

ಐನಿಲಯೇಶ ಐಸಂಕಾಶ
ಐನಿಲಯ ಚೆನ್ನವೀರೇಶಕೇಶ ॥ ೩ ॥

೧೬

ಜಯಮಂಗಳಂ ನಿತ್ಯ ಶುಭಮಂಗಳಂ
ಜಯಜಯತು ಗೌರೀಶ್ವರಗೆ ಗಣನಾಥಪಿತಗೆ ॥ ಪ ॥

ಮೇದಿನಿಯ ರಥಮಾಡಿ
ವೇದ ತುರಗವ ಹೂಡಿ
ಮಾಧವನ ಶರಗೂಡಿ ಗುರಿಯನೋಡಿ
ಭೂಧರವೆ ಬಿಲ್ಮಾಡಿ
ಆದೀಶೇಷನ ತೀಡಿ
ಕ್ರೋಧದಿಂ ತ್ರಿಪುರಗಳ ಭೇದಿಸಿದ ಶಿವಗೆ ॥ ೧ ॥

ಹಾಲಾಹಲ ಮಂದ
ಜ್ವಾಲಾಕರಗಳಿಂದ
ಕೀಲಾಲಜಾಕ್ಷ ಸುರಪತಿ ಶತಾನಂದ
ಜಾಲಕವ ಭೇದಿಸಿದ
ಕ್ಷ್ವೇಲವನೆ ಭಕ್ಷಿಸಿದ
ಕಾಲಕಾಲಪ್ರತಿಮ ನೀಲಕಂಠನಿಗೆ ॥ ೨ ॥

ದಿವಿಜ ಗಂಗಾಧರಗೆ
ರವಿಕೋಟಿ ತೇಜನಿಗೆ
ಭವರೋಗ ವೈದ್ಯನಿಗೆ ಅವಿಕಲಾಚಾರ್ಯನಿಗೆ
ಪ್ರವಿಮಳೈನಿಲಯನಿಗೆ
ಕವಿಜನಪ್ರಿಯನಿಗೆ
ಅವಿಕಳಾತ್ಮಕ ಚೆನ್ನವೀರೇಶ್ವರನಿಗೆ ॥ ೩ ॥

೧೭

ಜಯ ಜಯ ಕರ್ಪೂರ ಧವಲಾಗಾರ
ಜಯ ಜಯ ಕರ್ಪೂರ ಧವಲ ॥ ಪ ॥

ಪಾಂಡುರ ಕಿರಣ ಕಿರೀಟ ವಿರಾಜಿತ
ಖಂಡಿತಜಾಚ್ಯುತ ಪಾಲ
ಮಂಡಿತ ದಿವಿಜ ತರಂಗಿಣಿ ಮುನಿಗಣ
ಮಂಡಲ ಸಂಸೇವಿತ ಪಾದಕಮಲ ॥ ೧ ॥

ರಾಜ ಧನಂಜಯ ರವಿಲೋಚನ ಗಿರಿ
ರಾಜ ತನೂಭವ ಲೋಲ

ರಾಜರಾಜಸಖ ಶೋಭನಪಥನ
ರಾಜ ಶುಭೋದಯ ಸದ್ಗುಣಮಾಲ ॥ ೨ ॥

ಭಾಸ್ವತ್ಯನೆಲೆಯ ವಾಸ ಚೆನ್ನವೀ
ರೇಶ್ವರ ಭಕ್ತಾನುಕೂಲ
ಶಾಶ್ವತ ಮೋಕ್ಷವಿದಾಯಕ ಮಹಿತ ಮ
ಹೇಶ್ವರ ಪಾಹಿ ಮೇದಿನಿದಯಾಳ ॥ ೩ ॥

## ೧೮

ಮಂಗಳಾರತಿ ಬೆಳಗಿರೆ ಶಿವಗೆ
ಮಂಗಳಕರ ಧವಳಾಂಗಗೆ ವೃಷಭ । ತು
ರಂಗಗೆ ವಸಧಿ ನಿಷಂಗಗೆ ಶಿವಗೆ ॥ ಧ್ರು ॥

ಪಾವನರೂಪಗೆ ಭಾವಜಲೋಪಗೆ
ಮಾವರಕೋಪಗೆ ಗೋಪನಿಗೆ
ಪಾವಕ ಬೀಜಗೆ ಭಾವಿಕ ರಾಜಗೆ
ಸೇವಕ ಜನ ಸಂಜೀವಗೆ ಶಿವಗೆ ॥ ೧ ॥

ಮಹಿತ ಮಹೇಶಗೆ ಮಹಿಷನ ನಾಶಗೆ
ವಿಹಿತ ಗಣೇಶಗೆ ಈಶನಿಗೆ
ಮಹನೀಯಾತ್ಮಗೆ ಮಹಿಮಾನಿಯುತಗೆ
ತುಹಿನನಗೇಶ್ವರ ದುಹಿತೇಶ್ವರನಿಗೆ ॥ ೨ ॥

ಸುರಗಣಪಾಲಗೆ ಸುರಪಥಪಾಲಗೆ
ನಿರುಪಮಶೀಲಗೆ ನಿರಘನಿಗೆ
ಸ್ಫುರದ್ಯನಿಲಯಗೆ ಪುರಪುರವಿಲಯಗೆ
ವರಗುರು ಚೆನ್ನವೀರೇಶ್ವರಗೆ ॥ ೩ ॥

## ೧೯

ಏ ರಾಜವದನೆ ಮೃಡನಿಗೆ
ನಿರಾಜನೆತ್ತುವ ॥ ಪ ॥

ತೋಷಕರ ಸುಭಗ ನವ್ಯ
ವೇಷ ಸಂಹಿತೆ
ಭೀಷಣಮಯಾದಿ ಸಕಲ
ದೋಷ ಪರಿಹೃತೆ ॥ ೧ ॥

ನಿರುಪಮಾನಂದ ಸಾಧು
ಚರಿತೆ ಗುಣಯುತೆ
ಸ್ಫುರಿತ ಮೂಲಮಂತ್ರಸಹಿತೆ
ಪರಮಪತಿವ್ರತೆ ॥ ೨ ॥

ಪ್ರಲಸದ್ವೈನಿಲಯ ಚೆನ್ನವೀರ
[ನಲಸದ] ಸ್ತುತಿಮತೆ
ಅಲಸುಭಾವ ಭಕ್ತಿಭರಿಂತೆ
ಲಲನೆ ಕ್ಷಿತಿದ್ರುತೆ ॥ ೩ ॥

೨೦

ಧೂಪವಾಸನಮವಧರಿಸು ಶ್ರೀಗುರು ಮೂರ್ತಿ
ಧೂಪಮವಧರಿಸು
ಗೋಪಶೇಖರ ಶ್ರೀವಧೂಪ ಸುಪ್ರಿಯ ಶರ್ವ
ಗೋಪವಾಹನ ಜೀಯ ದೇವ ॥ ದ್ರು ॥

ಮಂಗಳಕರ ಭಕ್ತಸಂಗ ಮಾನಿತಸರ್ವ
ಮಂಗಳಾನ್ವಿತೋತ್ಸಂಗ
ತುಂಗ ಪ್ರತ್ಯೂಹ ವಿಭಂಗಾರ್ಜುನಂಗ ಪ
ತಂಗ ಕೃಶಾನು ಕುರಂಗಾಂಕ ಲೋಚನ ॥ ೧ ॥

ದಂಡಧರಾಂತಕ ಭೀಮಗಾನೇಷ್ಟ ವೇ
ದಂಡಾಸುರಾಂತ ಭೀಮ ಷಡರಿಕಾಜಿನ
ಮಂಡಿತ ಮಾಧವಕಾಂಡ ಸುಪರಣ
ಮಂಡಲ ಪಾಲನ ॥ ೨ ॥

ಮಾರಂಗ ಕದಳೀಭೇಶ ಹೇರಂಬ ಕು
ಮಾರಾಕ್ಷ ಸಾರ ಸಭೇಶ
ಸಾರ್ಯನಿಲಯ ಚೆನ್ನವೀರೇಶ ಮತ್ಕರ
ವಾರಿಜ ಪೀಠದೊಳಾರಾಜಿಸುವ ಶಂಭು ॥ ೩ ॥

೨೧

ಮಂಗಳಘುಷಮಾಂಗ ಶುಭಕರ । ಮಹಿತದೇವ
ಮಂಗಳ ಜಯ ಕೃಪಾಕರ
ಸಂಗ ಸಾಧು ಹೃದಯ ಕಮಲ
ಭೃಂಗ ಯೋಗಲೀನ ಚಿತ್ತ
ತುಂಗ ಭೂರುದ್ರ ಶಾರ್ದೂ
ಲಂಗಜಾತ ದರ್ಪವಿಹರ ॥ ಪ ॥

ಭವ್ಯ ಭಕ್ತಸಾಧ್ಯ ಶ್ರೀಕರ । ಬಹುಳ ಲೋಕ
ಸೇವ್ಯಮಾನ ಜ್ಞಾನಶೇಖರ
ದಿವ್ಯತೇಜ ಪ್ರಯುತ ಪೃಥುಳ
ನವ್ಯಮೂರ್ತಿ ಭವಾರಣ್ಯ
ಹವ್ಯವಾಹ ಸರಸಮಧುರ
ಕಾವ್ಯಕಾರ ಜನ ಪ್ರಸನ್ನ ॥ ೧ ॥

ವಿಜಿತರೇತ ಕಾಲ ಭಂಜನ । ವಿತತ ಧೀರ
ವೃಜಿನವಾರಿದ ಪ್ರಭಂಜನ
ಕುಜನವಾದಿವ್ರಾತ ಕುಧರ
ವ್ರಜ ವಿಭೇದ ವಜ್ರ ನಿರಘ
ಸುಜನ ನಿಚಯ ನಮಿತ ಪದಾಂ
ಬುಜ ಘನ ಪ್ರತಾಪ ಶೀಲ
ವೀರಸಾಂದ್ರ ಸತ್ಯಸಾಕರ । ವಿನುತ ಗುಣಗ
ಭೀರ ಸದ್ವೈನಿಲಯ ಗುರುವರ
ಸಾರಸಾಸ್ನವಿರ ವನವಿ
ಹಾರ ಗುಣಾಗಾರ ಭಯವಿ
ಹಾರ ಸಕಲವೇದ್ಯ ಘೃಣಾ
ಕಾರ ಮನ್ಮನೊಬ್ಜಶಯ್ಯಾ ॥ ೩ ॥

## ೨೨

ಆರತಿ ಬೆಳಗುವೆ ಅಖಿಳೇಶ್ವರಗೆ
ಆರತಿ ಬೆಳಗುವೆನನಘ ಮಲ್ಲೇಶ್ವರಗೆ
ಸಾರಾಕರ ಶ್ರೀಶೈಲ ಮಂದಿರಗೆ
ಶಾಶ್ವತ ಸುಂದರಗೆ ॥ ಪ ॥

ಮಲ್ಲಿಕಾಖ್ಯಸ್ತ್ರೀಯಳ ಪೊರೆದಾತನಿಗೆ
ಮಾನಿತದಾತನಿಗೆ
ಎಲ್ಲ ಚಂಚಸತಿಯರ ಪಾಲಿಸಿದಾತನಿಗೆ
ಎಡೆಯಲಾಡಿದಾತನಿಗೆ
ಸಲ್ಲಲಿತ ಮುನಿಸಂಘದೊಳಿರ್ದಾತನಿಗೆ
ಸುಗುಣನಿಧಿಗೆ
ಖುಲ್ಲ ಚಂದ್ರಗುಪ್ತನ ಧಿಕ್ಕರಿಸಿ
ಕುಶಲಾತ್ಮನೆನಿಸಿದ ಶಿವಯೋಗಿ
ಮಲ್ಲರಸರಿಗೆ ಮೆಚ್ಚಿದಾತನಿಗೆ
ಮನ್ನಾಥನಿಗೆ ॥ ೧ ॥

ಪರ್ವತ ಮುನಿ ಮಸ್ತಕದಿ ನೆಲಸಿದಾತನಿಗೆ
ಪರಮಾತ್ಮನಿಗೆ
ಸರ್ವದುರಿತಗಳ ಸಂಹರಿಸಿದಾತನಿಗೆ
ಸಜ್ಜನಗುಣನಿಧಿಗೆ
ದುರ್ವಿಘ್ನಮಯ ದೋಷವಿನಾಶಗೆ
ದೋರ್ದಂಡ ಪಾಶಗೆ
ಪೂರ್ವಮರರ ಪೂಣ್ದು ಕೆಡಪುತ
ಪುರ ಮೂರು ದಹನವ ಮಾಡಿ ಬಲ
ಧೂರ್ವನೆನಿಸಿದ ಮಹಾವೀರಭುಜಗೆ
ದೇವತರವ್ರಜಗೆ ॥ ೨ ॥

ವೀರ ಶಂಕರನ ವಿವರವ ತಿಳಿದಾತನಿಗೆ
ವಿಶ್ರುತ ಚರಿತನಿಗೆ
ದಾರುಕವನದೊಳು ದಟ್ಟಿಸಿನಿಂದಾತನಿಗೆ
ಧನ್ಯಾತ್ಮ ವರನಿಗೆ
ಚಾರುಮೇದಿನಿಯೊಳು ನೆಲಸಿರುವಾತನಿಗೆ

ಚಂದ್ರಾಂಚಿತ ಶಿರಗೆ
ಸಾರ್ಯೆನಿಲಯಗಾರದೊಳೊಪ್ಪುವ
ಧೀರ ಶ್ರೀಗುರು ಚೆನ್ನವೀರೇಶಗೆ
ಭೂರಿ ಭಕ್ತರನು ರಕ್ಷಿಸುವಾತನಿಗೆ
ಬುಧಜನದಾತನಿಗೆ ॥ ೩ ॥

೨೩

ಮಂಗಳಂ ಮಹಾಪ್ರಭಾವ
ಮಂಗಳಂ ಮಹಾನುಭಾವ
ಮಂಗಳಂ ಚಿದಂಗ ಸಿದ್ಧಲಿಂಗ ಮಂಗಳಂ ॥ ಧ್ರು ॥

ಕಾಮರಹಿತ ಮಹಿತ ಗುಣೋ
ದ್ದಾಮ ಶಿವಮತಾಬ್ಧಿ ಪೂರ್ಣ
ಸೋಮ ಭವ್ಯ ಸಿದ್ಧಲಿಂಗಸ್ವಾಮಿ ॥ ೧ ॥

ರುಂದ್ರ ವೀರಶೈವ ಚರ ಕ
ಲಿಂದ್ರ ಸದಾನಂದ ಸಮ್ಯಕ್
ಸಾಂದ್ರ ಸಿದ್ಧಲಿಂಗ ದೇಶಿಕೇಂದ್ರ ॥ ೨ ॥

ಭೂಸುತವಿನಾಶ ಸಮ ಮು
ನೀಶ ಹೃತ್ಕುಶೇಶಯ ನಿ
ವೇಶ ನಿತ್ಯ ಸಿದ್ಧಲಿಂಗೇಶ ॥ ೩ ॥

ಆಗಮಾರ್ಥ ವೇದ್ಯ ಮಹಾ
ಯೋಗ ಧುರಂಧರ ಕಲಿಂದ್ರ
ಪೋಗವಿನುತ ಸಿದ್ಧಲಿಂಗ ಯೋಗಿ ॥ ೪ ॥

ಸಾರಶುಭ್ರೆನಿಲಯ ಚೆನ್ನ
ವೀರಣಾರ್ಯ ಮನ್ಮನೋಬ್ಜ
ಸೂರ ಸಿದ್ಧಲಿಂಗ ಮಹಾಧೀರ ॥ ೫ ॥

೨೪

ಮಂಗಳಮಯ ಮಂತ್ರಮೂರ್ತಿ
ಮಂಗಳಕರ ಮತಿವಿವರ್ತಿ
ಭಾಂಗತೇಜ ರುದ್ರಮುನಿ ಶುಭಾಂಗ ॥ ದ್ರು ॥

ಲೋಕ ವಿನುತಯುಕ್ತ ಭಕ್ತ
ಲೋಕ ಹೃದಯಪದ್ಮ ಸದ್ಮ
ಲೋಕನೇತ್ರ ಪುತ್ರ ಕೃತ್ಯಭೇದ್ಯ ॥ ೧ ॥

ದೇವ ದೇವ ದುಷ್ಟಕಷ್ಟ
ದಾವದಾವ ಸದಾವಿಜಿತ
ಭಾವಭಾವ ಶುದ್ಧ ಸುಪ್ರಭಾವ ॥ ೨ ॥

ಸೋಮಮತ ತರಂಗಿಣೀಶ
ಸೋಮಸೋಮ ನೇಮಮಕುಟ
ನಾಮಭೂಮಿ ರುದ್ರಕುಲಸ್ವಾಮಿ ॥ ೩ ॥

ಕಾಲಕರ್ಮ ರಹಿತ ಮಹಿತ
ಜಾಲಜಾಲ ದೂರಕ ಘೃ
ಣಾಲಪಾಲ ಸತ್ಯಸುಜನಲೋಲ ॥ ೪ ॥

ಬಲಯಮಿಂದ್ರ ಭವ್ಯ ಗುಣ್ಯೆ
ನಿಲಯ ಗುರು ಚೆನ್ನವೀರವರೇಣ್ಯ ಧರಣಿ
ವಲಯವಿತ್ತ ರವಿ ಸರಸಿ ನಿಲಯ ॥ ೫ ॥

೨೫

ಮಂಗಳಾರತಿ ಬೆಳಗುವೆನಾರ್ಯನಿಗೆ
ಮದ್ಗುರುವರ್ಯನಿಗೆ
ಮಂಗಳ ಸೂಗೂರು ವೀರಭದ್ರನಿಗೆ
ಮಾನಿತಜನ ಕರುಣಾಸಮುದ್ರನಿಗೆ
ಭಂಗಭವಮಯ ದುರಿತ ಪರಿಹೃತಗೆ
ಭಯಜಾಲ ವಿಜಿತಗೆ ॥ ದ್ರು ॥

ಚಟುಲ ಭಯಂಕರ ಪಾವಕನೇತ್ರಗೆ
ಚಂಚದ್ಗಾತ್ರನಿಗೆ
ನಿಟಿಲನಯನದಿ ಜನ್ಮಿಸಿದಾತನಿಗೆ
ನಿತ್ಯಯಾವುಕನಿಗೆ
ಕುಟಿಲದಾನವರ ಕುಲಸಂಹಾರನಿಗೆ
ಕುಜನ ವಿದೂರನಿಗೆ
ಪಟುತರ ಭುಜಪ್ರತಾಪ ಶೂರಗೆ
ಪಾಥೋನಿಧಿ ಸನ್ನಿಭ ಗಂಭೀರಗೆ
ಸ್ಫುಟಭವ್ಯಗೆ ಮೃಡಮುಖನಲಸೂರ್ಯನಿಗೆ
ಸ್ಫುರದುರು ಶೌರ್ಯನಿಗೆ ॥ ೧ ॥

ವಿಧಿ ವಿಧು ನಿರ್ಜರವಿಭು ಮದಮರ್ದನಗೆ
ವಿಭವ ವಿವರ್ಧನಗೆ
ಸದಮಲ ಪ್ರಮಥಸಂಘ ವಿನಾಯಕಗೆ
ಸಂಧೃತ ಸಾಯಕಗೆ
ಭಿದುರನೀಲಕರವಿಂದ ಮಕುಟನಿಗೆ
ಭೀಕರ ವಿಕಟನಿಗೆ
ತ್ರಿದಶಲೋಕಂಗಳೆ ಪಾಲಿಸಿದಾತಗೆ
ತ್ರಿಣಯನಾಜ್ಞೆಯನಾಲಿಸಿದಾತಗೆ
ವಿದಿತ ಭದ್ರಕಾಳಮ್ಮನಾಥನಿಗೆ
ವಿಶ್ರುತದಾತನಿಗೆ ॥ ೨ ॥

ಕಾಕೋಲಧರ ಪುರಾಗ್ರದಿ ಸಂಸ್ಥಿತಗೆ
ಕಾಮಿತಯತಿಹಿತಗೆ
ಭೂಕಾಂತ ಶ್ರೀಲಕ್ಷ್ಮಣರಾಜನಿಗೆ
ಪೋಷಿಪ ತೇಜನಿಗೆ
ನಾಕಚರರ್ಕಳ ರಕ್ಷಿಸಿದಾತನಿಗೆ
ನಾನಾದ್ಯೋತನಿಗೆ
ಶ್ರೀಕರ್ರೆನಿಲಯವೆಂಬ ಪುರದೊಳಗೆ
ಶೋಭಿಸುವ ಗುರುಚೆನ್ನವೀರನಿಗೆ
ಪಾಕನಾದ ಶ್ರೀವೀರಭದ್ರನಿಗೆ
ಪಾವನವಿದನಿಗೆ ॥ ೩ ॥

೨೬

|| ಜ ||

ಮಂಗಳ ಸಮತೇಜ ಜಯತು
ಮಂಗಳ ಜಿತಾಕ್ಷ ಜಯತು
ಮಂಗಳ ಶ್ರೀವೀರಭದ್ರ ನಿಮಗೆ ಮಂಗಳಂ || ಪ ||

ಶ್ರೀಪ ಸುರಪಗೋಪ ಶೌರ್ಯಾ
ಟೋಪ ಸುಪ್ರತಾಪ ಮಹಾ
ಕೋಪಯುಕ್ತರೂಪ ವೀರಭೂಪ ಮಂಗಳಂ || ೧ ||

ರುಂದ್ರವಿಭವಸಾಂದ್ರ ಶಿವಗ
ಣೇಂದ್ರ ವಿಜಿತ ತಂದ್ರಬಾಣ
ವೃಂದ ಪುರಾಧೀಂದ್ರ ಸುವೀರೇಂದ್ರ ಮಂಗಳಂ || ೨ ||

ಕ್ಷುದ್ರ ವಿಘ್ನ ಭೂಧ್ರಭಿದುರ
ಛಿದ್ರ ಸದಾಸಕ್ತಪಾಸ
ಮುದ್ರ ಮಹಾರುದ್ರ ವೀರಭದ್ರ ಮಂಗಳಂ || ೩ ||

ಘೋರ ಭೂತ ಕ್ರೂರ ಪ್ರೇತ
ವಾರ ಜಿತ ಪ್ರವೀರ ವರದ
ಧೀರ ಘನಗಭೀರ ಕರಿವೀರ ಮಂಗಳಂ || ೪ ||

ಭಾಸುರೈನಿಲೇಶ ಸಕಲ
ದೋಷಕೃತ್ಯನಾಶ ಕೋಟಿ
ಭೇಶ ಕಾಶ ಚೆನ್ನವೀರೇಶ ಮಂಗಳಂ || ೫ ||

೨೭

ಆರತಿ ಬೆಳಗುವೆನಣಿವೀರೇಶ್ವರಗೆ
ಅಖಿಲಜನೇಶ್ವರಗೆ
ಆರತಿ ಬೆಳಗುವೆನಮಲಗಣೇಶಗೆ
ಸಾರಥಿಯಾದ ಸಮಾನಸುಧೀಶಗೆ

ಭಾರತಿಕಾಂತಾರ್ಚಿತ ಪದಪುಷ್ಕರಣಿ
ಭವ್ಯಾಮೃತಕರಗೆ ॥ ಪ ॥

ಮೃಡಲಲಾಟನಯನೋದ್ಭವ ದೇವಗೆ
ಮುಖ್ಯಾನುಭಾವಗೆ
ಜಡಜಭವಾಂಡ ವಿಪಾಲನ ಶೀಲನಿಗೆ
ಜಯವ್ರತಲೋಲನಿಗೆ
ಬಡಬಾನಲ ನಿರ್ಬಂಧಿಸಿದಾತನಿಗೆ
ಬಹು ವಿಖ್ಯಾತನಿಗೆ
ಉಡುತತಿಗಳ ಧರೆಗುರುಳಿಸಿದಾತಗೆ
ಉರ್ವಿಧರಂಗಳನುರೆ ಸೀಳ್ದಾತಗೆ
ತಡೆಯದೆ ದಕ್ಷನತಲೆಯ ಸಂಹರನಿಗೆ
ತತ ಯಾಗವಿಹರಗೆ ॥ ೧ ॥

ವಿಧಿಹರೀಂದ್ರರಿಗೆ ವಿರಚಿಸಿದಾತನಿಗೆ
ವಿಮಲದ್ಯೋತನಿಗೆ
ವಿದಿತ ವೇದಗಳ ಮನ್ನಿಸಿದಾತನಿಗೆ
ವಿಘ್ನ ವಿಧೂತನಿಗೆ
ಮದದ ದಾನವರ ಮುರಿದ ಪ್ರಚಂಡನಿಗೆ
ಮಹದ್ದೋರ್ದಂಡನಿಗೆ
ಸದಮಲಭಕ್ತಜನೋದ್ಧಾರಕನಿಗೆ
ಸಂಸಾರಾರ್ಣವತಟ ತಾರಕನಿಗೆ
ಕದನಶೂರ ಕರಿವೀರಭದ್ರನಿಗೆ
ಕರುಣಸಮುದ್ರನಿಗೆ ॥ ೨ ॥

ಕಾಮಿತಾರ್ಥಫಲಗಳ ಕೊಡುವಾತನಿಗೆ
ಕವಿಜನ ಪ್ರೀತನಿಗೆ
ಕಾಮಿನಿಭದ್ರಕಾಳಿನಾಥನಿಗೆ
ಕಲಿಯುತಚೇತನಿಗೆ
ಭೀಮಾಕಾರದ ಭೂತಗಣಾಂಕನಿಗೆ
ಬಿರುದಂಕಖಿಗೆ
ರಾಮಣೀಯಕೈನಿಲಯಪುರೇಂದ್ರಗೆ
ರಾಜರಾಜಗುರು ಚೆನ್ನವೀರೇಂದ್ರಗೆ
ಮಾಮಕ ಹೃದಯಾಂಭೋಜ ಮಿತ್ರನಿಗೆ
ಮಂಗಳಗಾತ್ರನಿಗೆ ॥ ೩ ॥

೨೮

ಶರಣು ಶರಣಾರ್ಥಿ ಬಕ್ಕಪ್ರಭುವೆ
ಸಜ್ಜನಗುಣವಿಭವೆ
ಕರುಣಾಂಬುಧಿ ಕರಣವಿಜಿತ ಮಲ
ಹರಣ ಸದ್ಗುಣಾಭರಣವೆ ಶರಣು ॥ ಪ ॥

ಸದಮಲ ಸತ್ಯಚರಿತಭರಿತ ಸ್ವರೂಪ
ಸುಜ್ಞಾನ ಕಲಾಪ
ಮದನ ಶಮನ ಮದಶಮನ ಕೃತಪ್ರತಾಪ
ಭಜಕರ ಹೃದ್ದೀಪ
ಪದಚತುರಂಗಳ ಮೀರಿದ ಯೋಗಾಲಾಪ
ಯತಿಜನ ಸಲ್ಲಾಪ
ಅಧಿಕಸುಖದ ಶಿವಯೋಗಾಭ್ಯಾಸದಿ ಲೋಪ
ಸಾಧಕರೊಳು ಭೂಪ
ವಿಧಿ ಹರೀಂದ್ರರಿಗೆ ಸಿಲುಕದ ಚಿತ್ಸುಖ
ಸದನದಿ ಸೇರಿದ ಮಹಿಮ ಚಿದ್ರೂಪ ॥ ೧ ॥

ಶುಕಮುನಿಯಂತೆ ಕಾಂತಾರದೊಳಿರುವಾತ
ನಿತ್ಯ ನಿರ್ಭೀತ
ನಿಖಿಲಜಗ ತೃಣದಂತೆ ಕಂಡ ಪ್ರಖ್ಯಾತ
ಭೂತಗಳಿಗೆ ನಾಥ
ಮುಖಮುಕುರದಿ ರವಿ ಜಲದೊಳು ತೋರುವಂತೆ
ಜನದೊಳಗಿರುವಾತ
ಸಕಲ ಪ್ರಪಂಚದಿ ಕೇರುಬೀಜ ಹುಟ್ಟಿದಂತೆ
ಮಾಯದೊಳಿರುವಾತ
ವಿಕಟ ಪರಂಜ್ಯೋತಿಯ ಪ್ರಭೆ ತುಂಬಿದ
ಭೃಕುಟಿ ರಸಾಮೃತ ಸೇವಿಸಿದಾತ ॥ ೨ ॥

ಆರರಿಯದ ವಸ್ತುವಿನೊಳು ಸೇರಿದ ಧೀರ
ತತ್ವದಿ ವಿಚಾರ
ಧಾರುಣಿ ಜನರ ತಿದ್ದಿದ ಮಹತ್ವದ ಸಾರ
ನಡೆಸುವ ಬಹು ಶೂರ
ಮೀರಿದ ಉನ್ಮನಿ ತೂರ್‍ಯ ವಸ್ತುವಿನಾಗಾರ

ಆಲೋಕನಸ್ಫೂರ
ಮೂರು ಕೂಟದೊಳು ಬೆಳಗುವ ಚಿದಾಕಾರ
ಸಂತತ ಸಂಚಾರ
ಸಾರ್ಯನೆಲೆ ಚೆನ್ನವೀರದೇವನೊಳು ಸೇರಿದ
ಬಕ್ಕಪ್ರಭು ಗಂಭೀರ ॥ ೩ ॥

೨೯

ಏ ಮಹಾದೇವನೆ ಯಾಕೆ ಬಕ್ಕಪ್ಪನ
ನೀ ಮಾಯ ಮಾಡುವರೆ
ಭೂಮಿಜನರಿಗೆಲ್ಲ ಕಾಮಧೇನುವಿನಂತೆ
ಕಾಮಿತಾರ್ಥವ ಕೊಡುವ
ಪ್ರೇಮಿ ಶಂಕರಸುತನ ॥ ದ್ರು ॥

ಭೂತಬ್ರಹ್ಮದೈತ್ಯ ಪ್ರೇತದುರ್ಜನ ಮಾರಿ
ಬೇತಾಳನೆದಿಯ ಗಂಡ
ಶೀತಾದಿ ಜ್ವರ ಗುಲ್ಮ ವಾತ ಪಾಂಡುರೋಗ
ಜಾತರುಜಕೆ ವೇತಂಡ
ಪಾತಕ ಪರವಿದ್ಯೆ ಘಾತಕ ತಂತ್ರದ
ಭೀತಿ ಅಳಿದ ಪ್ರಚಂಡ
ಭೂತಳದೊಳಗೆ ತಾನೀತೆರದಿರುವ ಪ್ರ
ಖ್ಯಾತ ಬಕ್ಕಪ್ಪನ ಯಾತಕೊಯ್ದಿರಿ ದೇವ ॥ ೧ ॥

ಹುಲಿಯನಾಕಳನು ಒಂದೆ ಹೊಳೆಯೊಳು ನೀರ್ಗುಡಿಸಿ
ಮಲೆಯೊಳು ಮೇಯಿಸಿದವನ
ಒಲಿದು ವೃಷಭನ ಬಾಯೊಳಗಿಂದೆ ವಿಭೂತಿ
ತಳುವದೆ ತೆಗೆಸಿದವನ
ಬೆಳಗನ ಮುನಿಗಳ ಬಳಿಲಿರ್ದು ಲೋಕಕೆ
ತಿಳಿಸದೆ ಚರಿಸುವವನ
ಇಳೆಗೆ ಮಹಾತ್ಮನ ಬೆಳೆಯಾದ ಶರಣನು
ಅಳಿದು ನೀವೆಮ್ಮನ್ನೆಲ್ಲ ಕಳವಳಿಕ್ಕಿದಿ ದೇವ ॥ ೨ ॥

ಪರಿಜನರಿಗೆ ಗಾಢ ನೆರಳಾಗಿರುವ ದೊಡ್ಡ
ಮರವು ಮುರಿದಂತಾಯಿತು
ಮರಿಯ ಪಕ್ಕದೊಳಿಟ್ಟು ಪೊರೆವ ಪಕ್ಷಿಯು ಬೇಟೆ
ಕರಗೆ ಸಿಕ್ಕಂತಾಯಿತು
ಪರಮಸೌಖ್ಯದ ಭರವ ತರುವ ಭಂಡಿಯು ನಡುವೆ
ಮುರಿದು ಬಿದ್ದಂತಾಯಿತು
ಪರನೆ ನಿಮ್ಮೊಳಗಂತಃಕರಣವಿಲ್ಲದ ಜಗದೊ
ಳಿರುವ ಸಜ್ಜನರೊಡಲೋಳುರಿಯನಿಕ್ಕಿದಿ ದೇವ ॥ ೩ ॥

ಪಲವು ಪಕ್ಷಿಗಳಿಗೆ ಫಲವ ಕೊಡುವ ವೃಕ್ಷ
ನೆಲಕೆ ಬಿದ್ದಂತಾಯಿತು
ಪೊಳಿಯೊಳು ಚರಿಸುವ ಪುಳುರಾಶಿಗಳಿಗೆಲ್ಲ
ಜಲವ ಬತ್ತಿದಂತಾಯಿತು
ಮೊಲೆಯ ಕುಡುವಾಕಳು ಎಳೆಗರುಗಳ ಬಿಟ್ಟು
ಪುಲಿಗೆ ಸಿಕ್ಕಂತಾಯಿತು
ಸುಲಭಸಾತ್ವಿಕ ಬಹಳ ಬಲವಂತ ಬಕ್ಕಪ್ಪ
ನಲಸದೆ ಒಯ್ದಿ ನೀನುಳಿಸದೆ ದೇವ ॥ ೪ ॥

ಧರಣಿಯೊಳೈನೆಲೆಪುರಕೆ ದಿಕ್ಕಾರಿನ್ನು
ಮರಳೆ ದಾರನಿರಿಸಿದಿ
ಅರಸಿ ಗಿರಿಜಮ್ಮನ ಅರಿಸಿನ ಸೌಭಾಗ್ಯ
ಹರಿವ ನೀರೊಳು ಕಲಸಿದಿ
ತರಳ ಸತ್ಕವಿ ಬಾಲ ಕರಿಬಸವೇಶಗೆ
ಮರುಗುವುದನೆ ಮಾಡಿದಿ
ಪರಕೆ ಪರತರವಾದ ಗುರು ಚೆನ್ನವೀರೇಶ
ಅರಿಯಬಾರದು ನಿಮ್ಮ ಚರಿತವಾರಿಗೆ ದೇವ ॥ ೫ ॥

## ೩೦

ನೋಡಿ ಕೀರ್ತನ ಮಾಡಿರಿ ಹೋಗಿ ವರವ
ಬೇಡಿ ವಂದಿಸಿ ಪಾಡಿರಿ
ಕೂಡಿದತುಳ ಪರಾಕ್ರಮದಿ ಬಹು

ರೂಢಿಸುತ ಕೊಟ್ರಕಿಯ ಪುರದೊಳು
ಮೂಡಿ ಪೂಜೆಯಗೊಂಬ ಚರಕುಲ
ಚೂಡರತ್ನ ರಾಚೋಟಿ ಶರಭನ ॥ ಪ ॥

ಸದಮಲಾತ್ಮಕ ಗಂಭೀರ ಮರ್ಜನವರ್ಗ
ಕುಧರಪವಿಯ ಮತ ಮಾಶೂರ
ಸದಯ ಬಹುಕೋವಿದ ಸುಶೀಲ ವಿ
ಬುಧ ಸುಜನಗಣ ತ್ರಿದಶ ಭೂರುಹ
ಅಧಿಕ ಸದ್ಗುಣ ಸದನ ಶೋಭನ
ವದನ ಶ್ರೀ ರಾಚೋಟಿ ದೇವನ ॥ ೧ ॥

ಶತಸ್ಮರರ ಪಳಿಕುರೂಪ ಸಚ್ಚರಿತ ಶಾಶ್ವತ
ಸತ್ಕಾಯುತ ಪ್ರತಾಪ
ಪ್ರತಿದಿನದೊಳತಿ ನುತಿಪ ಮರ್ತ್ಯರಿ
ಗತುಳಮುನ್ನತದೊಳೀವುತ
ಕ್ಷಿತಿ ಜನರೊಳಪ್ರತಿಮನೆನಿಸುವ
ವ್ರತನಭವ ದುರ್ಗತಿ ವಿರಹಿತನ ॥ ೨ ॥

ಸಾರಸುಜ್ಞಾನ ಭರಿತ ಐನೆಲೆಗೃಹ ಚೆನ್ನ
ವೀರೇಶ ದಯಾಪೂರಿತ
ವೀರಶೈವಾಚಾರ ಸುವ್ರತೋದ್ಧಾರ
ಪರಮತದೂರ ಶಾಂತಾ
ಕಾರ ಮಹಿಮ ವಿಹಾರ ವಿಶ್ರುತ
ಶೂರ ಶ್ರೀ ರಾಚೋಟಿದೇವನ ॥ ೩ ॥



# ಅನುಬಂಧ

ಕೆಲವು ಪದಗಳ ಅರ್ಥ

ಸ್ವರ ವಚನಗಳ ಅಕಾರಾದಿ

ಸಹಾಯಕ ಗ್ರಂಥಗಳು

# ಕೆಲವು ಪದಗಳ ಅರ್ಥ

ಅ

ಅಟ್ಟುಳಿ - ಕಾಟ
ಅಂಚಿತ - ಹೊಳೆಯುವ
ಅನಪತ್ಯ - ಮಕ್ಕಳಿಲ್ಲದವ
ಅನು - ಮನೋಹರ
ಅನುನಯ - ಪ್ರೀತಿ, ಸ್ನೇಹ
ಅಪಘನ - ದೇಹದ ಅವಯವ
ಅಪತ್ಯ - ಸಂತಾನ
ಅಪವರ್ಗ - ಮೋಕ್ಷ
ಅಪಹತ - ನಾಶಮಾಡಿದ
ಅಭಿಜನ - ನೀತಿವಂತ, ಸತ್ಕುಲಜ
ಅಭಿಭೂತ - ಸೋಲಿಸಲ್ಪಟ್ಟ
ಅಮರೀ - ದೇವತಾಸ್ತ್ರೀ
ಅರ್ಜುನ - ಬಿಳಿಯ
ಅವಲಂಬ - ಆಶ್ರಯ
ಅಸಿತ - ಕಪ್ಪಾದ
ಅಸಿಧೇನುಕೆ - ಕತ್ತಿ, ಖಡ್ಗ
ಅಳಿಕ - ನೊಸಲು

ಆ

ಆಕಲಿತ - ಹೊಂದಿಕೆಯಾದ
ಆಖಂಡಲ - ಇಂದ್ರ
ಆಢ್ಯ - ಶ್ರೀಮಂತ
ಆರ್ಕ - ಸೂರ್ಯ
ಆಶು - ಬೇಗನೆ
ಆಶುಗ - ಸೂರ್ಯ

ಇ

ಇಜ್ಯ - ಬೃಹಸ್ಪತಿ
ಇಡುಕು - ಚೆಲ್ಲು
ಇಂದ್ರದಿಕ್ಕು - ಪೂರ್ವದಿಕ್ಕು
ಇಂದ್ರಾಣಿ - ಶಚಿದೇವಿ
ಇಂದಿಂದಿರ - ಗುಂಗಿಹುಳು
ಇಂದಿರಾತ್ಮಜ - ಮನ್ಮಥ
ಇಂದೀವರ - ಕನ್ನೈದಿಲೆ

ಉ

ಉಕ್ಷ - ವೃಷಭ
ಉತ್ಕರ - ಸಮೂಹ
ಉತ್ತಂಸ - ಶ್ರೇಷ್ಠ
ಉತ್ಸುಕ - ಬಯಕೆಯುಳ್ಳ

ಏ

ಏಣಾಂಕ - ಚಂದ್ರ

ಓ

ಓಕ - ನಿವಾಸ
ಓಘ - ಪ್ರವಾಹ, ಸಮೂಹ

ಕ

ಕಕುಭ - ದಿಕ್ಕು
ಕಚಭರ - ಸಿಂಗರಿಸಿದ ಕೂದಲು
ಕಂಚುಕ - ಕುಪ್ಪುಸ
ಕಂಠೀರವ - ಸಿಂಹ
ಕದಕ್ಕದಿಸು - ಕಂಪಿಸು
ಕದಂಬ - ಸಮೂಹ
ಕಂದರ - ಗುಹೆ, ಗವಿ
ಕಬರಿ - ತುರುಬ
ಕಂಬು - ಶಂಖ

ಕಮನೀಯ - ಸುಂದರವಾದ
ಕರಕರೆ - ಚಿಂತಿಸು
ಕರಾಲ - ದೊಡ್ಡ, ಕಪ್ಪಾದ
ಕಲಂಬ - ಬಾಣ
ಕಲಭ - ಆನೆಯ ಮರಿ
ಕಲೇವರ - ದೇಹ
ಕಾಕೋದರ - ಸರ್ಪ
ಕಾಂಡನಿಧಿ - ಸಮುದ್ರ
ಕಾರೆ - ನೋವು
ಕಾರ್ಮುಕ - ಬಿಲ್ಲು
ಕಾಶ - ಪ್ರಕಾಶಿಸುವಿಕೆ
ಕಾಶ್ಮೀರ - ಕುಂಕುಮ, ಕೇಸರ
ಕಾಷ್ಠೆ - ದಿಕ್ಕು
ಕಿಸಲಯ - ಎಳದಳಿರು
ಕಿಂಶುಕ - ಮುತ್ತಲಗಿಡ
ಕೀನಾಶ - ಯಮ
ಕೀಶಪತಿ - ಕಪಿಗಳೊಡೆಯ
ಕುಂಜ - ಲತಾಮಂಟಪ
ಕುಟ್ಮಲ - ಮೊಗ್ಗು
ಕುಂದ - ಮಲ್ಲಿಗೆ ಹೂ
ಕುಧರ - ಪರ್ವತ
ಕುರಂಗ - ಚಿಗರೆ
ಕುರ್ಕುರ - ನಾಯಿ
ಕುಲಿಶ - ಗುಂಪಾದ
ಕುಶೇಶಯ - ಕಮಲ
ಕೃತ್ತಿ - ಚರ್ಮ
ಕೃಂತನ - ಕಡಿಯುವಿಕೆ
ಕೃಪಾಣ - ಕತ್ತಿ, ಕಠಾರಿ
ಕೃಶಾನು - ಅಗ್ನಿ
ಕೆಂಬೆರಲ್ - ಚಿಗುರಿನಂತಹ ಬೆರಳು
ಕೇಯೂರ - ಭೂಜಾಭರಣ
ಕೈತವ - ಮೋಸ
ಕೋಕ - ಚಕ್ರವಾಕ
ಕೋಕನದ - ಕೆಂದಾವರೆ
ಕೋಟೀರ - ಕಿರೀಟ
ಕೋದಂಡ - ಬಿಲ್ಲು
ಕೋಲ - ಆಭರಣ
ಕ್ರತು - ಶಿವ
ಕ್ಷಪಾಕರ - ಚಂದ್ರ
ಕ್ಷ್ವೇಳ - ವಿಷ

ಖ

ಖ - ಆಕಾಶ, ಇಂದ್ರಿಯ, ಮನಸ್ಸು
ಖಂಜನ - ಮಡಿವಳಹಕ್ಕಿ

ಗ

ಗ - ಗಮಿಸುವ
ಗಿಣ್ಣಿಲ - ಗಿಂಡಿ, ಕಲಶ
ಗುಲ್ಲು - ಮುದ್ರೆ, ಗುರುತು
ಗುಹ - ಕಾರ್ತಿಕೇಯ ಸ್ವಾಮಿ
ಗೇಯ - ಗಾನ
ಗೋ - ಪರ್ವತ
ಗೌರ - ಬಿಳಿ

ಘ

ಘೃಣಾ - ದಯೆ
ಘೋಟಕ - ಕುದುರೆ

ಚ

ಚಂಚತ್ - ಹೊಳೆಯುವ
ಚಂಚರೀಕ - ಭ್ರಮರ
ಚಟುಲ - ಚೆಲುವಿನ
ಚಂಡ - ಉಗ್ರ
ಚಣ - ನಿಪುಣ, ಪ್ರಖ್ಯಾತ
ಚಾಂದ್ರ - ಅಮೃತಶಿಲೆ
ಚಿಕುರ - ಕೇಶಪಾಶ
ಚಿತ್ತರ - ಪ್ರತಿಬಿಂಬ
ಚೇತ - ಶಕ್ತಿ, ಬಲ
ಚೇಲ - ಉಡುಪು

ಛ

ಛದ - ಕಾಂತಿ, ಬೆಳಗು

ಜ

ಜಂಬಾಲ - ಕೆಸರು

ಜಂಬೂನದ - ಮೇರು ಪರ್ವತ
ಜಂಭೀರ - ಗಜಲಿಂಬೆ
ಜರುಬು - ಹೊಟ್ಟೆಕಿಚ್ಚು
ಜಲ್ಲನೆ - ಒಮ್ಮೆಲೆ
ಜಾಂಗುಳಿ - ಗಾರುಡಿಗ
ಜಾತವೇದ - ಅಗ್ನಿ
ಜಾಲ - ಸಮೂಹ
ಜೀಮೂತ - ಮೋಡ
ಜೈವಾತೃಕ - ಚಂದ್ರ
ಜೊಂಗುಳಿ - ಮೂರ್ಛೆ
ಜೊನ್ನೊಡಲ - ಚಂದ್ರ

ಝ

ಝೋಂಪಿಸು - ತೂಕಡಿಸು

ಡ

ಡಿಂಡೀರ - ಸಮುದ್ರನೊರೆ

ತ

ತಕ್ತಿ - ಪಟ್ಟಿ
ತಟಿನಿ - ನದಿ
ತತ - ಪ್ರಖ್ಯಾತ
ತಂದ್ರ - ಬಳಲಿದ, ದಣಿದ
ತನಿ - ಒಳ್ಳೆಯ
ತರಣ - ಪಾರಾಗುವಿಕೆ
ತಾಮರಸ - ಕಮಲ
ತಾರಕಾರಿ - ಷಣ್ಮುಖಸ್ವಾಮಿ
ತಾರಿಸು - ದಾಟಿಸು
ತಾವಕ - ತಮ್ಮ
ತುಂಬುರ - ದೇವಗಂಧರ್ವ
ತುರಂಗಮ - ಕುದುರೆ
ತುಷಾರ - ಹಿಮ
ತುಹಿನ - ಹಿಮ
ತೂಣ - ಆವೇಶ
ತೂಣೀರ - ಬತ್ತಳಿಕೆ
ತೋಮರ - ಬಾಣ
ತೋಯಜ - ಕಮಲ
ತೋಷ - ಆನಂದ

ತ್ರ್ಯಂಬಕ - ಶಿವ

ದ

ದಂದಶೂಕ - ಸರ್ಪ
ದಮುನ - ಅಗ್ನಿ
ದಸಿ - ಶೂಲ
ದಾರಕ - ಬಾಲಕ
ದಾವ - ಕಾಡ್ಗಿಚ್ಚು
ದಿಮ್ಮಿದ - ಬಲ್ಲಿದ
ದಿವಿಷದ - ಸ್ವರ್ಗದಲ್ಲಿ ಶ್ರೇಷ್ಠವಾದ
ದುಹಿತೆ - ಮಗಳು
ದೃಗು - ಕಣ್ಣು
ದೇಹಿ - ದಯಪಾಲಿಸು
ದೊರಗು - ಒರಟು
ದೋರ್ದಂಡ - ದಪ್ಪನೆಯ ತೋಳು
ದ್ವಿಪ - ಆನೆ
ದ್ವಿರದ - ಆನೆ
ದ್ಯುತೆ - ಹೊಳಪುಳ್ಳವಳು

ಧ

ಧನಂಜಯ - ಅಗ್ನಿ
ಧನ್ವ - ಬಿಲ್ಲು
ಧವ - ಪತಿ
ಧಾತ್ರ - ಬ್ರಹ್ಮ
ಧಾಮನಿಧಿ - ಸೂರ್ಯ
ಧೀಮಂತ - ವಿವೇಕಿ
ಧುನಿ - ಹೊಳೆ, ನದಿ
ಧುರಂದರೆ - ನಾಯಕಿ
ಧುರ್ಯ - ಮುಖಂಡನಾದವ
ಧ್ರುವ - ಸ್ಥಿರವಾದ

ನ

ನಕ್ತಂಚರ - ರಾಕ್ಷಸ
ನಗರಿಪು - ದೇವೇಂದ್ರ
ನಂದ - ಆನಂದ
ನಾಗರಿ - ಚತುರಸ್ತ್ರೀ
ನಿಕಾಯ್ಯ - ಮನೆ
ನಿಕುರುಂಬ - ಗುಂಪು, ಸಮೂಹ

ನಿಧನ - ನಿವಾಸ

ನಿಭ - ಬೆಳಕು

ನಿರ್ - ನಿಶ್ಚಯ ಎಂಬರ್ಥದ ಉಪಸರ್ಗ

ನಿರ್ಧೂತ - ಶುಚಿ ಮಾಡಲ್ಪಟ್ಟ

ನಿಶಾಂತ - ವಾಸದ ಮನೆ, ಅರುಣೋದಯ

ನಿಷಂಗ - ಬತ್ತಳಿಕೆ

ನಿಸದ - ನಿಜ, ನಿಶ್ಚಯ

ನೀಟುಗಾತಿ - ಬೆಡಗಿನವಳು

ನೀರದ - ಮೋಡ

ನೀರಾಜನ - ಆರತಿ

**ಪ**

ಪ - ಒಡೆಯ

ಪಟಲ - ಸಮೂಹ

ಪತಂಗ - ಸೂರ್ಯ

ಪದ್ಮಾಲಯೆ - ಲಕ್ಷ್ಮೀದೇವಿ

ಪನ್ನ - ಬಿಂಕ, ಜಂಭ

ಪರಭೃತ - ಕೋಗಿಲೆ

ಪರಿಘ - ಗದೆ

ಪರಿತೋಷ - ಆನಂದ

ಪರಿಹೃತ - ಹೊರದೂಡಲ್ಪಟ್ಟ

ಪವಿ - ಇಂದ್ರನ ವಜ್ರಾಯುಧ

ಪಾಕ - ಪೂರ್ಣ, ಇಂದ್ರನಿಂದ ಕೊಲ್ಲಲ್ಪಟ್ಟ ಒಬ್ಬ ದೈತ್ಯ

ಪಾಠೀನ - ಮೀನು

ಪಾಂಡುರ - ಬಿಳುಪಾದ

ಪಾಥೋನಿಧಿ - ಸಮುದ್ರ

ಪಾರಾವತ - ಪಾರಿವಾಳ

ಪಾರಾವಾರ - ಸಮುದ್ರ

ಪಿಂಗಲ - ಕಂದುಗೆಂಪು

ಪಿತೃಪತಿ - ಯಮಧರ್ಮ

ಪುಲೋಮಜಾ - ಪುಲೋಮನ ಮಗಳು

ಪುಷ್ಕರ - ಕಮಲ

ಪೂತ - ಪವಿತ್ರವಾದ

ಪೂಷ - ಸೂರ್ಯ

ಪೃಥುಲ - ದೊಡ್ಡ

ಪೊಂಗು - ಅರಳು

ಪೋತ - ಹಡಗು

ಪ್ರತ್ಯೂಹ - ವಿಘ್ನ

ಪ್ರಥಿತ - ಪ್ರಸಿದ್ಧಿಯ

ಪ್ರಭಂಜನ - ಬಿರುಗಾಳಿ

ಪ್ರಭೂತ - ಪರಿಪೂರ್ಣ

ಪ್ರವರ - ಶ್ರೇಷ್ಠ

ಪ್ರಸವ - ಹೂ

ಪ್ರಾಲೇಯ - ಹಿಮ

**ಬ**

ಬತ - ಅಯ್ಯೋ, ಆಶ್ಚರ್ಯ ಉದ್ಗಾರ

ಬಿಬ್ಬೋಕ - ಹುಸಿ, ಮುನಿಸು

ಬೃಂದಾರಕ - ದೇವತೆ

ಬೈತ್ರ - ದೋಣಿ

ಬೋಸರಿಸು - ಮರುಳುಮಾಡು

**ಭ**

ಭ - ನಕ್ಷತ್ರ

ಭಾ - ಪ್ರಕಾಶ

ಭಾವಕಿ - ಸುಂದರಿ

ಭೀರ - ಹೇಡಿ

ಭುಜಗ - ಸರ್ಪ

ಭೂಧ್ರ - ಪರ್ವತ

ಭೂರಿ - ದೊಡ್ಡ

ಭೃತ - ತುಂಬಿದ

ಭೋಗಿ - ಸರ್ಪ

**ಮ**

ಮಖಾರಿ - ಶಿವ

ಮಂಜು - ಮನೋಹರವಾದ

ಮಯಣ - ಮದನ, ಕಾಮ

ಮರಂದ - ಮಕರಂದ

ಮಹಿತ - ಶ್ರೇಷ್ಠ

| | | | |
|---|---|---|---|
| ಮಹಿರೆ | - ಹಿಮ | ಲಲಾಮ | - ಶ್ರೇಷ್ಠ |
| ಮಕರಕೇತನ | - ಕಾಮ | ಲುಲಾಯ | - ಎಮ್ಮೆ |
| ಮಾ | - ಲಕ್ಷ್ಮೀದೇವಿ | ಲೋಕನೇತ್ರ | - ಸೂರ್ಯ |
| ಮಾಕಂದ | - ಮಾವಿನಮರ | ಲೋಲ | - ಚಂಚಲವಾದ |
| ಮಾಮಕ | - ನನ್ನ | ವ | |
| ಮಾರ | - ಕೊಲ್ಲುವಿಕೆ | ವಂದಾರು | - ಭಕ್ತ |
| ಮಾರ್ಗಣ | - ಬಾಣ | ವನ | - ನೀರು |
| ಮಾರ್ತಂಡ | - ಸೂರ್ಯ | ವನಧಿ | - ಸಮುದ್ರ |
| ಮಾಲಿಸು | - ದಿಟ್ಟಿಸು, ಬಾಗಿಸು | ವಪು | - ದೇಹ, ಆಕಾರ |
| ಮಿಳಿತ | - ಕೂಡಿದ | ವರೂಥ | - ರಥ |
| ಮೀನಾಂಕ | - ಕಾಮ | ವರೆ | - ಸುಂದರಿ |
| ಮಂದಿರ | - ಮೋಡ | ವಹಿಲ | - ತೀವ್ರ |
| ಮುಸಲ | - ಒನಕೆ | ವಾರ | - ವಿಘ್ನ |
| ಮೇ | - ನನ್ನನ್ನು | ವಾರಣ | - ಆನೆ |
| ಮೇಚಕ | - ನೀಳವರ್ಣ, ಕಪ್ಪು | ವಾರಿದ | - ಮೋಡ |
| ಮೈನಾಕ | - ಒಂದು ಪರ್ವತ | ವಾರಿಸು | - ನಿವಾರಿಸು |
| ಮೊಗರು | - ಎಳೆಯ | ವಾಸರ | - ಹಗಲು, ಸೂರ್ಯ |
| ಮೋಚ | - ಬಿಡುಗಡೆ | ವಾಸವ | - ಇಂದ್ರ |
| ಯ | | ವಿಗತ | - ಕಳೆದ, ಹೋದ |
| ಯಮಿ | - ತಪಸ್ವಿ, ಋಷಿ | ವಿಚಕಿಲ | - ಸೂಜಿಮಲ್ಲಿಗೆ |
| ರ | | ವಿತತ | - ವಿಸ್ತಾರವಾದ |
| ರದನ | - ಹಲ್ಲು | ವಿತ್ತ | - ಪ್ರಸಿದ್ಧ |
| ರಂಭೆ | - ಬಾಳೆಯಮರ | ವಿತಾನ | - ಗುಂಪು, ವಿಸ್ತಾರ |
| ರಯ್ಯ | - ಸುಂದರವಾದ | ವಿದಾರಣೆ | - ಮುರಿಯುವಿಕೆ |
| ರಾಜ | - ಚಂದ್ರ | ವಿದುಷ | - ವಿದ್ವಾಂಸ |
| ರಾಜೀವ | - ಕಮಲ | ವಿದ್ಯೋತ | - ಪ್ರಕಾಶಿಸುವ |
| ರುದ್ರ | - ಭಯಂಕರ, ಶಿವ | ವಿಧು | - ಚಂದಿರ |
| ರುಂದ್ರ | - ವಿಶಾಲವಾದ | ವಿಧೂತೆ | - ಹೋಗಲಾಡಿಸಿದ |
| ರೇತ | - ಬಿಳಿಯ | ವಿಧೃತ | - ಎತ್ತಿಹಿಡಿದ |
| ರೈ | - ಸಂಪತ್ತು | ವಿಯುತ | - ದೂರವಾದ |
| ರೋಲಂಬ | - ತುಂಬಿ | ವಿರಾಜಿತ | - ಪ್ರಕಾಶಿತ |
| ರೌಪ್ಯ | - ಬೆಳ್ಳಿಯ | ವಿರೋಚನ | - ಅಗ್ನಿ |
| ಲ | | ವಿವರ್ತ | - ಪರಿವರ್ತನೆ |
| ಲಕ್ಷ್ಮಣ | - ಸಿರಿವಂತ | ವಿಶದ | - ಶುದ್ಧ |
| ಲಪನ | - ಮುಖ | ವಿಶ್ರಂಭ | - ವಿಶ್ವಾಸದ |

ವಿಶಿಖ - ಬಾಣ
ವಿಶ್ರುತ - ಪ್ರಸಿದ್ಧವಾದ
ವಿಸ - ನೀರು
ವಿಸರ - ಪಸರಿಸುವಿಕೆ
ವಿಹೃತ - ಹೋಗಲಾಡಿಸಿದ
ವೀತ - ಬಿಟ್ಟ
ವೀತಿಹೋತ್ರ - ಅಗ್ನಿ
ವೃಜಿನ - ಪಾಪಕರ್ಮ
ವೃಷ - ವೃಷಭ
ವೃಷಾಕಪಿ - ಪರಮೇಶ್ವರ
ವೇತ್ತ - ತಿಳಿದವ, ಜ್ಞಾನಿ
ವೇದಿ - ಬಲ್ಲಿದ
ವೇಷ್ಟ - ಆವರಣ

ಶ

ಶಂ - ಸುಖಸಂತೋಷ-ವನ್ನುಂಟು ಮಾಡುವ
ಶತಕ್ರತು - ದೇವೇಂದ್ರ
ಶತಧೃತಿ - ಇಂದ್ರ, ಬ್ರಹ್ಮ
ಶತಮುಖ - ದೇವೇಂದ್ರ
ಶತಾಂಗ - ರಥ
ಶಬಲ - ಹಲವು ಬಣ್ಣಗಳನ್ನುಳ್ಳ
ಶಂಬ - ಸಿಡಿಲು
ಶಂಬರ - ನೀರು
ಶಮಿ - ಆತ್ಮಸಂಯಮಿ
ಶರಣ್ಯ - ಆಶ್ರಯ ಕೊಡಲು ತಕ್ಕ
ಶರಭ - ಸಿಂಹಕ್ಕಿಂತ ಬಲಿಷ್ಠ ಒಂದು ಕಾಲ್ಪನಿಕ ಪ್ರಾಣಿ, ವೀರಭದ್ರಾವತಾರ
ಶರಾಸನ - ಬಿಲ್ಲು
ಶಾತ - ಸುಂದರವಾದ
ಶಾತಕುಂಭ - ಅಪರಂಜಿ
ಶಾದಜ - ಕಮಲ
ಶಾರದ - ಬಿಳಿಯ
ಶಿತ - ಕಪ್ಪುಬಣ್ಣದ

ಶಿಪಿವಿಷ್ಟ - ಬೋಳುತಲೆಯ, ಶಿವ
ಶುಕ - ಶಿವ
ಶುಂಡಾಲ - ಆನೆ
ಶ್ರೀದ - ಸಂಪತ್ತನ್ನು ಕೊಡುವವ

ಸ

ಸಂಸೃತಿ - ಸಂಸಾರ, ಪ್ರಪಂಚ
ಸಜ್ಜುಕ - ಮೊಗ್ಗೆ
ಸತ್ರ - ಯಜ್ಞ
ಸದೃಕ್ಷ - ಅಂತಹ
ಸನ್ನಿಭ - ಸಮಾನ
ಸಮೀರ - ವಾಯು
ಸರಸಿ - ಸರೋವರ
ಸಾಮಜ - ಸಂಗೀತ
ಸಾರ - ಶ್ರೇಷ್ಠವಾದ
ಸಾರಂಗ - ಚಂದ್ರ
ಸಿತ - ಬಿಳಿ
ಸಿಂಧು - ಸಮುದ್ರ
ಸಿಂಧುರ - ಆನೆ
ಸಿಂಹಿಕೆ - ರಾಹುವಿನ ತಾಯಿ
ಸೀಮಂತಮಣಿ - ಮುಡಿಮಣಿ
ಸುತ್ರಾಮ - ದೇವೇಂದ್ರ
ಸುಮಾನ - ಸಂತೋಷ
ಸುಷಮ - ಅತಿಮನೋಹರ
ಸುಸ್ಥ - ಚೆನ್ನಾಗಿರುವ
ಸೆಡೆ - ಹೆದರು
ಸೈಕತ - ಉಸುಕಿನ ರಾಶಿ
ಸ್ಯಂದನ - ನದಿ, ಜಿನುಗುವ
ಸ್ವರ್ನದಿ - ದೇವಗಂಗಾನದಿ
ಸ್ವಾಂತ - ಮನಸ್ಸು, ಅಂತಃಕರಣ
ಸ್ಮೇರ - ಅರಳಿದ, ಎಳನಗೆ

ಹ

ಹರಿಣ - ಬಿಳಿ
ಹೂ - ಕಾಮ
ಹೇರಂಬ - ಗಣಪತಿ



## ಸ್ವರವಚನಗಳ ಅಕಾರಾದಿ
(ಚರಣದ ಮುಂದಿನ ಅಂಕಿ ಪುಟಸಂಖ್ಯೆಯನ್ನು ಸೂಚಿಸುತ್ತವೆ)

---

ಕುಧರ ವಿಭವ ವರಸುತೆ ಸುಮತಿ ೩೫
ಕೂಡಲಿಲ್ಲವೊ ಪ್ರಿಯೆ ಕೋವಿದನೊಡನೆ ೧೨೫
ಕೇಳಿರಿ ನೀವೆಲ್ಲ ಕೌತುಕವಾದುದು ೧೪೪
ಕೇಳು ರಮಣನೆವೊಲಿದು ೭೫
ಕೇಳೆ ಬಾಲೆ ಕಾಮಿನಿರನ್ನೆ ೧೦೯

ಗ

ಗಮನಭಂಗಿ ಸಾರೆ ವಾರಿಜಾಸ್ತ್ರ ೧೦೬
ಗುಪ್ತಪಾತಕರ ಗೃಹದೊಳಗಿರುವುದು ೧೯೯
ಗುರುಕರುಣವೇತ್ತವರಿಗೆ ನರಗುರಿಗಳು ೫
ಗುರುವೆ ನೋಡು ನಿತ್ಯ ಘೋರ ೬೨
ಗೋರಾಜಸುತೇಪತೆ ನಮೋ ನಮೋ ೭

ಘ

ಘನರುಚಿಗಲದೇವ ಸಮವ ಗೌರೀಶ ೧೬
ಘೋರ ಭವಕೆ ತನುಗೊಡದಾತಗೆ ೧೮೩

ಜ

ಜಯ ಜಯ ಕರ್ಪೂರ ಧವಲಾಗಾರ ೧೯೭
ಜಯ ಮಂಗಲ ಜಯ ಪಿಂಗಲ ಕುಂತಲ ೧೮೯
ಜಯ ಮಂಗಳಂ ನಿತ್ಯ ಶುಭಮಂಗಳಂ ಗೌರೀಶ್ವರಗೆ ೧೯೬
ಜಯ ಮಂಗಳಂ ನಿತ್ಯ ಶುಭಮಂಗಳಂ ಶ್ರೀ ಇಷ್ಟಲಿಂಗೇಶಗೆ ೧೮೬
ಜಾಣೆ ಕರತಾರೆ ಆತನ ಪ್ರಾಣನಾಥನ ೧೦೦
ಜಾಣೆಯಾದ ವರಗೆ ಮೋಹಿನಿಯೆ ೧೧೧
ಜಾತಸುತೆ ನೀ ವಾರೆ ಸಖಿ ಒಯ್ಯಾರ ೭೬
ಜಾತಿನಡತೆಗಳು ಜರಿದು ಬಿಟ್ಟವನನು ೧೭೨
ಜ್ಞಾನಹೀನನೊಳು ಧ್ಯಾನಯೋಗ ೧೮೧

ತ

ತನ್ನ ನಿಜವನರಿದಾತನೆ ಧರೆಯೊಳು ೧೭೪
ತಾಥಯ್ಯ ಥಯ್ಯ ಥಯ್ಯಾರೆ ೧೫೦
ತಾನೆ ಬಾರದೆ ಹೋದ ತರುಣಿ ೮೪
ತಾಯೆ ಶೈಲರಾಜಕುಮಾರಿ ೩೪
ತಾಳಲಾರೆನೆ ಪಾಲನ ಕಾಣದೆ ೯೩
ತೋಯಜಾನನೆ ಕೇಳೆ ಕಾಯಜನ ೧೦೫

ನೀನೆ ಕಿನಿಸು ಮಾಡುವರೆ ಒಯ್ಯಾರೆ ೧೩೧

ನೀ ಬರಿದೆ ಬಹುದಿನಗಳದಿ ೧೫೫

ನೋಡಿ ಕೀರ್ತನ ಮಾಡಿರಿ ೨೦೯

ನೋಡಿದೆ ನೆನೆದು ಲಿಂಗಯ್ಯನ ೧೩೯

ನೋಡಿ ರಕ್ಷಿಸು ನೀ ಎನ್ನೊಡೆಯ ೪೭

ನೋಡು ನಿಜಸುಖ ನಿನ್ನೊಳು ೧೩೭

ನೋಡುವ ಬಾರೆ ಏ ಗೆಳದಿ ೧೨೭

ನೋಡುವ ಬಾರೆ ಬಾ ತಂಗಿ ೧೩೮

ಪ

ಪರ್ವವನೆ ಮಾಡಿದಳೊ ಪದ್ಮನಯನೆ ೧೩೩

ಪಾಲಯ ಮಾಂ ದೇವ ಶ್ರೀಕ್ಷಪಾಕರಶೇಖರ ೧೪

ಪಾಲಿಸಯ್ಯ ವಟಪಾದ ಪಾಲಿಸಯ್ಯಧೀಶ ೨೦

ಪಾಲಯಾಂಬು ರಾಮಲಿಂಗ ರಾಜಶೇಖರ ೧೪

ಪಾಲಿಸಯ್ಯ ಪರಮಪುರುಷ ೪೧

ಪಾಲಿಸಯ್ಯ ಪಾರ್ವತೀಶ ೨೫

ಪಾಲಿಸುವುದೈ ಪ್ರಾಣಲಿಂಗ ೫

ಪಾಲಿಸೆನ್ನ ಸೋಮನಾಥ ೫೦

ಪಾಹಿಮಾಂ ಶರಣು ಬಸವ ೪೫

ಪಾಹಿ ಶಂಕರ ಶಿವಸುಖಧಾಮ ೨೪

ಪಾಹಿ ಶ್ರೀಗುರು ವರದಣಿವೀರಭದ್ರ ೫೪

ಪಾಹಿ ಶ್ರೀಸೋಮೇಶ ೪೮

ಪಾಹಿ ಸಾಂಬ ಪಾವನ ಡಿಂಬ ೩೨

ಪ್ರಿಯ ಕುಲಪುಂಗವ ಹೋ ೧೩೨

ಪ್ರಿಯತಮನು ದ್ರವಾಂಗಕೆ ಸೇರನೆ ೭೫

ಪ್ರಿಯ ನಿನ್ನ ಧ್ಯಾನ ಮರೆದಿರವಲ್ಲಳೊ ೮೮

ಪ್ರಿಯವಚನಗಳುಳ್ಳ ಪ್ರೌಢನಲ್ಲಿ ೧೭೯

ಫ

ಫಾಲಾಕ್ಷ ಬಾರ ಕೇಶಪಾಹಿ ಗೌರೀಶ ೨೦

ಬ

ಬಂತು ಬಸಂತವಿಲಾಸ ಮನೋರಮ ೧೨೪

ಬಂದನೇನೆ ತಾಂ ಬಂದನೇನೆ ೮೨

ಮ



ರ

## ಸಹಾಯಕ ಸಾಮಗ್ರಿ


೧. ಗ್ರಂಥಗಳ ಪಟ್ಟಿ - ಕಪಟರಾಳ ಕೃಷ್ಣರಾಯರು, ಶರಣ ಸಾಹಿತ್ಯ ೪.೭, ೧೯೪೧.

೨. ಕರಿಬಸವಾರ್ಯ ಕೃತ ಬಸವೇಶ್ವರ ರಘಟಾಬಂಧ - ಸಂ.ಎಸ್. ಶಿವಣ್ಣ ಬಸವಪಥ ೩-೭ ಅಕ್ಟೋಬರ್ ೧೯೮೧.

೩. ಕರಿಬಸವಾರ್ಯಕೃತ ಗಣನಾಮ ರತ್ನಾವಳಿ ರಗಳೆ - ಸಂ. ಎಸ್. ಶಿವಣ್ಣ ಬಸವಪಥ ೩-೮, ನವಂಬರ್ ೧೯೮೧.

೪. ವೀರಶೈವ ಅಪ್ರಕಟಿತ ಗ್ರಂಥಸೂಚಿ - ಸಂ. ಎಸ್. ಶಿವಣ್ಣ ವೀರಶೈವ ಅಧ್ಯಯನ ಸಂಸ್ಥೆ ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ, ಗದಗ - ೧೯೮೨.

೫. ಕಡಕೋಳ ಮಡಿವಾಳೇಶ್ವರ ವಿರಚಿತ ಸ್ವರವಚನಗಳು - ಸಂ. ಡಾ.ಎಂ.ಎಸ್. ಲಠ್ಠೆ, ವೀರಶೈವ ಅಧ್ಯಯನ ಸಂಸ್ಥೆ, ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ ಗದಗ ೧೯೮೨.

೬. ಕುಮಾರ ವಿಜಯವಿಳಾಸ - ಕನ್ನಡ ಅಧ್ಯಯನ ಸಂಸ್ಥೆ, ಗುಲಬರ್ಗಾ ವಿಶ್ವವಿದ್ಯಾಲಯ ಗುಲಬರ್ಗಾ ೧೯೮೭.

೭. ಕರಿಬಸವಾರ್ಯ ವಿರಚಿತ ಬಸವೇಶ್ವರ ಸ್ತೋತ್ರದ ಪರಿವರ್ಧಿನಿ - ಸಂ. ಶಿವರಾಜ ಎಂ. ದೇವಪ್ಪ ಬಸವಪಥ - ೧೬-೪ ಜುಲೈ ೧೯೯೪.

೮. ನೀತಿ ರತ್ನಾಕರ - ಸಂ. ಶಿವರಾಜ ಎಂ. ದೇವಪ್ಪ ಚಿತ್ಕಲೆ ಗ್ರಂಥಮಾಲೆ ಪ್ರಕಾಶನ ವಿರಕ್ತಮಠ ಹೂವಿನಶಿಗ್ಲಿ, ಜಿಲ್ಲೆ ಧಾರವಾಡ ೧೯೯೪.

೯. ಗುಲಬರ್ಗಾ ಜಿಲ್ಲೆಯ ಅನುಭಾವಿ ಕವಿಗಳ ಚರಿತ್ರೆ - ಡಾ. ಬಸವರಾಜ ಸಬರದ ಬಸವಪಥ ೧೮-೮ ನವೆಂಬರ್ ೧೯೯೬.

೧೦. ಚನ್ನವೀರ - ಸಂ. ಡಾ. ಸಂಗಮೇಶ ಸವದತ್ತಿಮಠ.

೧೧. ಸ್ವರವಚನ ಸಂಪುಟ. ೨, ಸಂ. ಎಸ್. ಶಿವಣ್ಣ, ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆ, ಮೈಸೂರು ೧೯೯೫.

೧೨. ಕರಿಬಸವಾರ್ಯ ವಿರಚಿತ ಅಪ್ರಕಟಿತ ಹಸ್ತ ಪ್ರತಿಗಳು.

## ಸಮಗ್ರ ಸ್ವರವಚನ ಪ್ರಕಟನ ಯೋಜನೆ

ಅನುಭಾವದ ವಾಚನಪಾತಳಿಗಾಗಿ ಬರೆದ "ವಚನ ಸಾಹಿತ್ಯ "ದಂತೆ, ಶ್ರವಣಪಾತಳಿಗಾಗಿ ಬರೆದ "ಸ್ವರ ವಚನ ಸಾಹಿತ್ಯ"ವು ಕನ್ನಡಕ್ಕೆ ವೀರಶೈವರು ನೀಡಿದ ಅಪೂರ್ವ ಕೊಡುಗೆಯೆನಿಸಿದೆ. ಗುಣ-ಗಾತ್ರ ದೃಷ್ಟಿಯಿಂದ ಗಣ್ಯವೆನಿಸಿರುವ ಈ ಸಾಹಿತ್ಯದ ಸಮಗ್ರ ಪ್ರಕಟನ ಯೋಜನೆಯನ್ನು "ಶಿವರಾತ್ರೀಶ್ವರ ಗ್ರಂಥ ಮಾಲೆ"ಯ ಮೂಲಕ ಕೈಗೆತ್ತಿಕೊಂಡಿದ್ದು, ಈವರೆಗೆ ಬೆಳಕು ಕಂಡ ಸಂಪುಟಗಳು ಹೀಗಿವೆ :

**ಒಂದನೆಯ ಕಂತು : ೧೯೮೫**

ಸ್ವರವಚನ ಸಾಹಿತ್ಯ ಸಂಪುಟ ೧
—(ಸಂ.) ಎಸ್. ಶಿವಣ್ಣ

ಸ್ವರವಚನ ಸಾಹಿತ್ಯ ಸಂಪುಟ ೨
—ಎಸ್. ಶಿವಣ್ಣ

ಸ್ವರವಚನ ಸಾಹಿತ್ಯ ಸಂಪುಟ ೩
—ಜಿ. ಜಿ. ಮಂಜುನಾಥ್

ಸ್ವರವಚನ ಸಾಹಿತ್ಯ ಸಂಪುಟ ೪
—ವೈ. ಸಿ. ಭಾನುಮತಿ

ಸ್ವರವಚನ ಸಾಹಿತ್ಯ ಸಂಪುಟ ೫
—ಕೆ. ಆರ್. ಶೇಷಗಿರಿ

**ಎರಡನೆಯ ಕಂತು : ೧೯೮೭**

ಸ್ವರವಚನ ಸಾಹಿತ್ಯ ಸಂಪುಟ ೬
—ಎಸ್. ಎಂ. ಹಿರೇಮಠ

ಸ್ವರವಚನ ಸಾಹಿತ್ಯ ಸಂಪುಟ ೭
—ಶಿವರಾಜ ದೇವಪ್ಪ

ಸ್ವರವಚನ ಸಾಹಿತ್ಯ ಸಂಪುಟ ೮
—ಬಿ. ವಿ. ಮಲ್ಲಾಪುರ

ಸ್ವರವಚನ ಸಾಹಿತ್ಯ ಸಂಪುಟ ೯
—ವೀರಣ್ಣ ರಾಜೂರ

ಸ್ವರವಚನ ಸಾಹಿತ್ಯ ಸಂಪುಟ ೧೦
—ವೈ. ಸಿ. ಭಾನುಮತಿ

---

ಜಗದ್ಗುರು ಶಿವರಾತ್ರೀಶ್ವರ ಗ್ರಂಥಮಾಲೆ, ಮೈಸೂರು